# ಕರಾವಳಿ ಲೇಖಕಿಯರ- ವಾಚಕಿಯರ ಸಂಘ
# ಒಂದು ಪರಿಚಯಾತ್ಮಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ-ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ನಿಬಂಧ

ಸಂಶೋಧಕಿ
ಪ್ರಸನ್ನಕುಮಾರಿ ಜೆ.
ನೋಂದಣಿ ಸಂಖ್ಯೆ: ೧೭೧೧೦೧೦೩೦೦೪೪

ಮಾರ್ಗದರ್ಶಕರು
ಡಾ. ವರದರಾಜ ಚಂದ್ರಗಿರಿ

೨೦೧೭

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಕರಾವಳಿ ಲೇಖಕಿಯರ– ವಾಚಕಿಯರ ಸಂಘ ಒಂದು ಪರಿಚಯಾತ್ಮಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ–ಎಂ.ಫಿಲ್ ಪದವಿಗಾಗಿ

ಸಾದರಪಡಿಸಿದ ನಿಬಂಧ



ಸಂಶೋಧಕಿ
ಪ್ರಸನ್ನಕುಮಾರಿ ಜಿ.

ನೋಂದಣಿ ಸಂಖ್ಯೆ: ೧೬೧೧೦೧೦೩೦೦೪೪

ಮಾರ್ಗದರ್ಶಕರು
ಡಾ। ವರದರಾಜ ಚಂದ್ರಗಿರಿ

೨೦೧೭

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಯೋಗ್ಯತಾ ಪತ್ರ

ಪ್ರಸನ್ನಕುಮಾರಿ ಜಿ. ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ *'ಕರಾವಳಿ ಲೇಖಕಿಯರ- ವಾಚಕಿಯರ ಸಂಘ ಒಂದು ಪರಿಚಯಾತ್ಮಕ ಅಧ್ಯಯನ'* ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ನಿಬಂಧವು ಸಂಶೋಧಕಿಯ ಸ್ವಂತ ಪರಿಶ್ರಮ, ಅಭಿಪ್ರಾಯ ಸಂಗ್ರಹ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

ಡಾ.ವರದರಾಜ ಚಂದ್ರಗಿರಿ
ಸಂಶೋಧನಾ ಮಾರ್ಗದರ್ಶಕರು

ಡಾ. ವರದರಾಜ ಚಂದ್ರಗಿರಿ
ಸಹ ಪ್ರಾಧ್ಯಾಪಕರು (ಕನ್ನಡ)
ಮಂಜುನಾಥ ಪೈ ಸ್ಮಾರಕ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕಾರ್ಕಳ - 574104, ಉಡುಪಿ ಜಿಲ್ಲೆ

# ಪ್ರಮಾಣ ಪತ್ರ

ಕನ್ನಡ ವಿಶ್ವ ವಿದ್ಯಾಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **'ಕರಾವಳಿ ಲೇಖಕಿಯರ– ವಾಚಕಿಯರ ಸಂಘ ಒಂದು ಪರಿಚಯಾತ್ಮಕ ಅಧ್ಯಯನ'** ಎಂಬ ಶೀರ್ಷಿಕೆಯ ಈ ನಿಬಂಧವು ಈ ಸಂಶೋಧಕಿಯ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ವರದರಾಜ ಚಂದ್ರಗಿರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ**
**ಬಲ್ಮಠ, ಮಂಗಳೂರು**

**ಪ್ರಸನ್ನಕುಮಾರಿ ಜಿ.**
**ಸಂಶೋಧಕಿ**

# ಕರಾವಳಿ ಲೇಖಕಿಯರ– ವಾಚಕಿಯರ ಸಂಘ
# ಒಂದು ಪರಿಚಯಾತ್ಮಕ ಅಧ್ಯಯನ

## ಅಧ್ಯಾಯ ವಿವರಗಳು

# ೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧ ಪ್ರಸ್ತಾವನೆ :

ಇಪ್ಪತ್ತನೇ ಶತಮಾನ ಮಹಿಳೆಯ ಪಾಲಿಗೆ ನವಪರ್ವಕಾಲ. ಮಹಿಳೆ ಬಗೆಗಿನ ದೃಷ್ಟಿಕೋನ ಮತ್ತು ಸಮಾಜದ ದೃಷ್ಟಿಕೋನಗಳು ಸಾಕಷ್ಟು ಬದಲಾದ ಕಾಲ ಘಟ್ಟ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಜೊತೆಗೆ ಸಮಾಜ ಸುಧಾರಣೆ ಕಾರ್ಯದಲ್ಲಿ ತೊಡಗಿಸಿಕೊಂಡ ಮಹಾತ್ಮಾಗಾಂಧೀಜಿ, ರಾಜಾರಾಮ್ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ್ ಮೊದಲಾದವರು ಮಹಿಳಾ ವರ್ಗಕ್ಕೆ ಬಹುದೊಡ್ಡ ಕೊಡುಗೆ ನೀಡಿದ್ದಾರೆ. ಸಮಾಜದಲ್ಲಿ ಬಹುದೊಡ್ಡ ಶಾಪವಾಗಿದ್ದ ಬಾಲ್ಯವಿವಾಹದ ರದ್ಧತಿ ಹಾಗೆಯೇ ವಿಧವಾ ವಿವಾಹಕ್ಕೆ, ಅಂತರ್ಜಾತೀಯ ವಿವಾಹಕ್ಕೆ ಮನ್ನಣೆ ದೊರಕಿಸುವಲ್ಲಿ ಇವರ ಪಾತ್ರ ಅತ್ಯಮೂಲ್ಯವಾದುದು. ಇವರುಗಳ ಜೊತೆಯಲ್ಲಿ ಮಹಿಳೆಯರ ಮುಂದಾಳುಗಳಾಗಿ ಕಸ್ತೂರ್‌ಬಾ, ಸರೋಜಿನಿ ನಾಯ್ಡು, ಕಮಲಾ ನೆಹರು, ಸುಚೇತಾ ಕೃಪಲಾಗಿ, ಪ್ರಭಾವತಿ ದೇವಿ ಮೊದಲಾದವರ ಹೆಸರುಗಳು ಚಿರಸ್ಮರಣೀಯವಾದುದು. ಇವರೆಲ್ಲರ ಫಲವಾಗಿಯೇ ಭಾರತದ ಸಂವಿಧಾನದಲ್ಲಿ ಮಹಿಳೆಗೆ ಪುರುಷ ಸಮಾನವಾದ ಹಕ್ಕು ಲಭಿಸಿದೆ. ಇದರ ಜೊತೆಗೆ ಸಾಮಾಜಿಕ, ಆರ್ಥಿಕ, ರಾಜಕೀಯ, ಸಮಾನತೆಯನ್ನು, ಕಾರ್ಮಿಕ ಶಾಸನಗಳು, ಸಾಮಾಜಿಕ ಶಾಸನ, ಅನುವಂಶಿಕ ಹಕ್ಕು, ದತ್ತು ಮಕ್ಕಳ ಹಕ್ಕು, ವಿಚ್ಛೇದನ ಹಕ್ಕುಗಳನ್ನು ನೀಡಲಾಗಿದೆ.

ಜಗತ್ತಿನಲ್ಲಿ ಎಲ್ಲಾ ಸ್ತ್ರೀಯರು ಇಂದು ಯಾವುದೇ ಒಂದು ರೂಪದಲ್ಲಿ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ನೈತಿಕ ಸಮಸ್ಯೆಗಳನ್ನೆದುರಿಸುತ್ತಿದ್ದಾರೆ. ಇಂದು ಸ್ತ್ರೀಯರು ಯಾವುದೇ ದೇಶದಲ್ಲಿದ್ದರೂ ಅವರ ಸಮಸ್ಯೆಗಳು ಭಿನ್ನ ಭಿನ್ನ ಸ್ವರೂಪದಾಗಿದ್ದರೂ ಅವುಗಳ ಸ್ವಭಾವ ಒಂದೇ. ಈ ನಿಟ್ಟಿನಲ್ಲಿ ಇವುಗಳ ಬಗ್ಗೆ ಅರಿವು ಉಂಟಾಗಿದೆ ಎನ್ನುವುದರ ಫಲವೇ ಮಹಿಳಾ ವರ್ಷದ ಘೋಷಣೆಯಾಗಿದೆ. ೧೯೭೫ರಿಂದ ೧೯೮೫ರ ಅವಧಿಯನ್ನು ಮಹಿಳಾ ದಶಕದ ಅವಧಿ ಎಂದೇ ಹೇಳಬಹುದು. ಯಾಕೆಂದರೆ ಸಮಾನತೆ ಸ್ವಾತಂತ್ರ್ಯದ ಹಕ್ಕು ಮೊದಲಾದ ಸಾಹಿತ್ಯೇತರ ವಿಷಯಗಳ ಕುರಿತು ಮಹಿಳಾ ವರ್ಗ ಎಚ್ಚರಗೊಂಡಿತು. ನಮ್ಮ ಸಂಸ್ಕೃತಿ ಪರಂಪರೆಗಳಿಂದ ಬದುಕಿನಲ್ಲಿ ಶೋಷಣೆಗೊಳಗಾದ ಬಗೆಗಿನ ಅರಿವು ಅನ್ಯಾಯ ಶೋಷಣೆಗಳ ಕಾರಣ ಮತ್ತು ವಿಶ್ಲೇಷಣೆ ಅವುಗಳನ್ನು ಎದುರಿಸಬೇಕಾದ ಪ್ರಜ್ಞೆ ಸಂಘಟನೆಯ ಅಗತ್ಯ ಇವೆಲ್ಲವುಗಳ ಪ್ರೇರಣೆಗಳಿಂದಲೇ ಅನೇಕ ಮಹಿಳಾ ಸಂಘಟನೆಗಳು ಹುಟ್ಟಿಕೊಂಡವು. ಇದ್ದವುಗಳು ಪುನಶ್ಚೇತನ ಪಡೆದುಕೊಳ್ಳುವಂತಾಯಿತು. ಲೇಖಕಿಯರಾಗಿ ಸಂಘಟಿತರಾಗಬೇಕಾದುದು ಅನಿವಾರ್ಯವಾಯಿತು. ಈ ದೃಷ್ಟಿಯಲ್ಲಿ ೧೯೭೯ರಲ್ಲಿ ಮೊದಲ ಬಾರಿಗೆ ಬೆಂಗಳೂರಿನಲ್ಲಿ ಕರ್ನಾಟಕ ಲೇಖಕಿಯರ ಸಂಘ ಜನ್ಮತಾಳಿತು. ನಂತರ ಬೇರೆ ಬೇರೆ ಜಿಲ್ಲೆಗಳಲ್ಲೂ ಇಂತಹ ಲೇಖಕಿಯರ ಸಂಘಗಳು ಹುಟ್ಟಿ ಕೊಂಡವು. ಮಂಗಳೂರು, ಪುತ್ತೂರು. ಕಾಸರಗೋಡಿನಲ್ಲಿ ಮಹಿಳಾ ಸಾಹಿತ್ಯಗೋಷ್ಠಿ ನಡೆದ ಫಲಿತಾಂಶವಾಗಿ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳಿಗೆ ಒಳಗೊಂಡಂತೆ ಮಂಗಳೂರಿನಲ್ಲಿ ಲೇಖಕಿಯರ ವಾಚಕಿಯರ ಸಂಘಟನೆಯಾದ 'ಕರಾವಳಿ' ಹುಟ್ಟಿಕೊಂಡಿತು. ಈ ಸಂಘವು ಇದೀಗ ಮೂರು ದಶಕಗಳಿಂದ ಮಹಿಳಾ ಸಾಹಿತ್ಯದ ಬಗೆಗೆ ನಡೆಸಿದ ಕಾರ್ಯಕ್ರಮಗಳು ಜಿಲ್ಲೆಯ ಉದಯೋನ್ಮುಖಿ ಬರಹಗಾರ್ತಿಯರಿಗೆ ಪ್ರೋತ್ಸಾಹ ಸ್ಫೂರ್ತಿಯನ್ನು ತುಂಬುತ್ತಿದೆ. ಸಮಾಜದಲ್ಲಿ ಮಹಿಳೆ ಗುರುತಿಸಿಕೊಳ್ಳಲು ಸತತ ಪ್ರಯತ್ನಗಳನ್ನು ನಡೆಸುತ್ತಾ ಬಂದಿರುತ್ತಾಳೆ. ಅದರಲ್ಲೂ ಸಾಹಿತ್ಯಿಕ ಸಂದರ್ಭದಲ್ಲಿ ಮಹಿಳೆ ಸಂಘಟಿತಳಾಗಿ ತನ್ನನ್ನು ಗುರುತಿಸಲು ಪ್ರಯತ್ನ ನಡೆಸುತ್ತಿದ್ದಾಳೆ. ಈ ಹಾದಿಯಲ್ಲಿ ಲೇಖಕಿ ವಾಚಕಿಯರ ಸಂಘ ಎದುರಿಸಿದ ಸಮಸ್ಯೆ, ಸವಾಲುಗಳು. ಟೀಕೆಗಳು ಹಲವು. ಇಂತಹ ಸಾಹಿತ್ಯ ಪರ ಸಂಘಟನೆಯಲ್ಲಿ ಮಹಿಳಾ ಸಾಹಿತ್ಯ ಸಂಘ ಪ್ರಸ್ತುತ ಸಮಾಜಕ್ಕೆ ಅತೀ ಅಗತ್ಯವಾಗಿದೆ. ಲೇಖಕಿಯರು ಮಾತ್ರವಲ್ಲ

ವಾಚಕಿಯರ ಬಳಗವನ್ನು ಒಳಗೊಂಡಂತೆ ಇರುವ ಸಂಘ ಕೈಗೊಳ್ಳುವ ಕಾರ್ಯಕ್ರಮಗಳು ನೈತಿಕ ಪ್ರಜ್ಞೆಯನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಸಾಹಿತ್ಯ ಪ್ರಕಾರಗಳ ಬಗ್ಗೆ ಜ್ಞಾನವೇ ಇಲ್ಲದ ಒಂದು ಸಂದರ್ಭದಲ್ಲಿ ಬರವಣಿಗೆಗಳನ್ನು ತಿದ್ದಿ ತೀಡಿ ವಿಮರ್ಶಿಸಿ ಬರವಣಿಗೆಗೂ ಮನ್ನಣೆ ದೊರಕಿಸಿ ಕೊಡುವುದರಲ್ಲಿ ಸಂಘದ ಪಾತ್ರ ಅನನ್ಯವಾದುದು. ಈ ನಿಟ್ಟಿನಲ್ಲಿ ಒಂದು ಮಹಿಳಾ ಸಾಹಿತ್ಯ ಸಂಘವು ಸಮಾಜದಲ್ಲಿ ಗುರುತಿಸಿಕೊಂಡು ೩೦ ವರ್ಷಗಳಲ್ಲಿ ಮಾಡಿದ ಸಾಧನೆಯನ್ನು ಅರಿತುಕೊಳ್ಳಬೇಕಾದರೆ ಒಂದು ಸಮಗ್ರ ಅಧ್ಯಯನ ನಡೆಯಬೇಕು.

## ೧.೨ ಅಧ್ಯಯನದ ಉದ್ದೇಶ:

ಕಳೆದ ಎರಡು ದಶಕಗಳಿಂದೀಚೆಗೆ ಮಹಿಳಾ ಪರವಾದ ಅಧ್ಯಯನಗಳು ತೀವ್ರವಾಗಿ ನಡೆಯುತ್ತಿದೆ. ಈ ಅವಧಿಯಲ್ಲಿ ಬಹುಮುಖ್ಯವಾಗಿ ಮುಸ್ಲಿಂ ಮಹಿಳಾ ಸಂವೇದನೆ ಬಗೆಗಿನ ಅಧ್ಯಯನಗಳು, ಪುರಾಣಗಳಲ್ಲಿನ ಸ್ತ್ರೀ ಪಾತ್ರದ ಬಗ್ಗೆ ಅಧ್ಯಯನಗಳು, ಜಾಹೀರಾತು ಮತ್ತು ಮಾಧ್ಯಮಗಳಲ್ಲಿ ಮಹಿಳೆ, ಗ್ರಾಮೀಣ ಮಹಿಳೆ ಮತ್ತು ನಗರವಾಸಿ ಮಹಿಳೆಯ ಬದುಕು, ವಿಧವೆಯರ ಸಮಸ್ಯೆಗಳು, ಶಿಕ್ಷಣದಲ್ಲಿ ಮಹಿಳೆ, ರಾಜಕೀಯದಲ್ಲಿ ಮಹಿಳೆ, ಆದಿವಾಸಿ ಮಹಿಳೆಯರು, ಸ್ತ್ರೀಯರ ಸ್ಥಾನಮಾನ ಮಹಿಳಾ ದೌರ್ಜನ್ಯ, ವೇಶ್ಯ ಸಮಸ್ಯೆ, ಸೌಂದರ್ಯ ಸಂಸ್ಕೃತಿ, ಧರ್ಮ ಮತ್ತು ಸಂಸ್ಕೃತಿ, ಸ್ತ್ರೀ–ಮುಕ್ತಿ ವಿಚಾರವಾಗಿ ಚಿಂತನೆ ಹೀಗೆ ಹಲವಾರು ನೆಲೆಗಳಲ್ಲಿ ಮಹಿಳಾ ಪರವಾದ ಅಧ್ಯಯನಗಳು ನಡೆದಿವೆ ಮತ್ತು ನಡೆಯುತ್ತಿದೆ. ಹೀಗೆ ಮಹಿಳಾ ಅಧ್ಯಯನದ ತಾತ್ವಿಕ ಗ್ರಹಿಕೆಯನ್ನು ಕೇಂದ್ರವಾಗಿಟ್ಟುಕೊಂಡು ಲೇಖಕಿಯರ ವಾಚಕಿಯರ ಸಂಘ ಸುದೀರ್ಘ ಮೂರು ದಶಕದಲ್ಲಿ ಮಹಿಳಾ ಸಾಹಿತ್ಯಕ್ಕೆ ನೀಡಿದ ಕೊಡುಗೆ ಮತ್ತು ಸಾಧನೆಗಳನ್ನು ಶೋಧಿಸುವ ಉದ್ದೇಶ ಹೊಂದಿದೆ.

ಸರ್ವಸಮಾನತೆಯ ದೃಷ್ಟಿಯಲ್ಲಿ ಯಾವುದೇ ಧರ್ಮ, ವರ್ಣ, ಲಿಂಗ ಭೇದವಿಲ್ಲದೆ ಲೇಖಕಿಯರು, ವಾಚಕಿಯರು, ನೃತ್ಯ ಕಲಾವಿದರು, ಸಂಗೀತಗಾರರು, ನಾಟಕಕಾರರು – ಹೀಗೆ ಎಲ್ಲಾ ರೀತಿಯ ಕಲಾ ಕೌಶಲ್ಯವನ್ನು ಹೊಂದಿದ ಮಹಿಳಾ ಮಣಿಯರನ್ನೊಳಗೊಂಡು ಸಕ್ರೀಯವಾಗಿ ತಮ್ಮನ್ನು ತೊಡಗಿಕೊಂಡ ಸಂಘ ಕರಾವಳಿ ಲೇಖಕಿಯರ ವಾಚಕಿಯರ ಸಂಘ. ಈ ಸಂಸ್ಥೆಯ ಹುಟ್ಟು, ಬೆಳವಣಿಗೆ, ಪರಿಣಾಮಗಳ ಬಗ್ಗೆ ಯಾವುದೇ ಅಧ್ಯಯನಗಳು ಇಲ್ಲಿಯವರೆಗೆ ನಡೆಯದೇ ಇರುವುದರಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದ್ದು, ಇದು ಈ ಸಂಘಟನೆಯ ಮೂರು ದಶಕಗಳ ಸಾಧನೆಯನ್ನು ಪರಿಚಯಿಸುವ ಅಧ್ಯಯನವೂ ಆಗಲಿದೆ ಎಂದು ಭಾವಿಸಲಾಗಿದೆ. ವಿದ್ಯೆ, ಕಲೆ, ಸಂಸ್ಕೃತಿ, ಸಾಹಿತ್ಯಾಭ್ಯಾಸ ಹೀಗೆ ಹಲವು ಉದ್ದೇಶಗಳನ್ನೂ ಇಟ್ಟುಕೊಂಡು ಮೂರು ದಶಕಗಳಿಂದ ಸಕ್ರೀಯವಾಗಿದ್ದ ಸಂಘವು ಇಂದಿನ ಸ್ತ್ರೀಪರ ಆಲೋಚನೆಗೆ ಹೊಸ ಆಯಾಮವನ್ನೊದಗಿಸುವ ದೃಷ್ಟಿಯಿಂದಲೂ ಅಧ್ಯಯನ ಯೋಗ್ಯವಾದುದು ಎಂದು ತಿಳಿಯಲಾಗಿದೆ.

ಇಂತಹ ಸಂಘಗಳು ಕರ್ನಾಟಕದಾದ್ಯಂತ ಬೇರೆ ಬೇರೆ ಜಿಲ್ಲೆಗಳಲ್ಲಿ ಹುಟ್ಟಿಕೊಂಡಿದೆ. ಅವುಗಳ ತೌಲನಿಕ ಅಧ್ಯಯನದ ಬಗೆಗೂ ಪ್ರಯತ್ನಿಸಲಾಗುವುದು ಇದಕ್ಕೆ ಪೂರಕವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಪೂರ್ವದ ಅವಧಿಯಲ್ಲಿ ಸಕ್ರೀಯವಾಗಿದ್ದು ಗುರುತಿಸದೇ ಹೋದ ಮಹಿಳೆಯರ ಸಾಹಿತ್ಯಿಕ ಸಾಧನೆಯನ್ನು ದಾಖಲಿಸುವುದು ಮತ್ತು ಪ್ರಸ್ತುತ ಸಂಘದ ಮೂಲಕ ಬೆಳಕಿಗೆ ಬಂದ ಪ್ರಸಿದ್ಧರಾದ ಲೇಖಕಿಯರ ಕುರಿತು ಇಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ.

ಸಾಹಿತ್ಯ ಪರವಾದ ಸಂಘಗಳು ಹುಟ್ಟಿಕೊಂಡ ಕಾಲದಲ್ಲಿ ಸ್ತ್ರೀ–ಪುರುಷರನ್ನೊಳಗೊಂಡ ಸಂಘಗಳಲ್ಲಿ ಸ್ತ್ರೀಯರಿಗೆ ಪುರುಷರಿಗಿರುವಷ್ಟೇ ಸ್ಥಾನಮಾನ ಇರಲಿಲ್ಲ. ಮಹಿಳೆಯರು ಬರೆದ ಕೃತಿಗಳಿಗೆ ಪುರುಷರಷ್ಟು ಮನ್ನಣೆ ದೊರಕುತ್ತಿರಲಿಲ್ಲ.

ವಿಮರ್ಶೆಗಳನ್ನೂ ಮಾಡುತ್ತಿರಲಿಲ್ಲ. ಜೊತೆಗೆ ಮಹಿಳೆಯರಿಗೆ ಯಾವುದೇ ವೇದಿಕೆಯು ಲಭ್ಯವಾಗುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಮಹಿಳೆಯರಿಗೆ ಅವರದೇ ಆದ ಸಾಹಿತ್ಯ ಪರ ಸಂಘಟನೆಗಳು ಅನಿವಾರ್ಯವಾಗಿದೆ ಮತ್ತು ಅಗತ್ಯವೂ ಆಗಿದೆ ಈ ಹಿನ್ನೆಲೆಯ ಕಾರಣದಿಂದಾಗಿ ಸಾಹಿತ್ಯ ಪರವಾದ ಹಲವು ಮಹಿಳಾ ಸಂಘಟನೆಗಳು ಹುಟ್ಟಿಕೊಂಡಿತಾದರು. ಸಂಘಟನೆಗಳು ಸಮಾಜದ ಸ್ವಾಸ್ತ್ಯ ಕಾಪಾಡುವುದರಲ್ಲಿ ಮತ್ತು ನೈತಿಕ ಪ್ರಜ್ಞೆ ಬೆಳೆಸುವುದರಲ್ಲಿ ಇವುಗಳ ಪಾತ್ರವೇನು ಎಂಬ ಬಗೆಯಲ್ಲಿ ಅಧ್ಯಯನ ಹೆಚ್ಚು ಶ್ರಮವನ್ನೂ ತಾತ್ವಿಕ ಒಳ ರಚನೆಯನ್ನು ಬಯಸುತ್ತದೆ. ಒಟ್ಟನಲ್ಲಿ ಅಧ್ಯಯನವು ಲೇಖಕಿಯರ ಮತ್ತು ವಾಚಕಿಯರ ಸಂಘಕ್ಕೆ ಸಂಬಂಧಿಸಿದ ವಿಷಯಗಳನ್ನು ವಿಶ್ಲೇಷಣೆ ಮಾಡಿ ಈ ಸಂಘದ ಸಾಧನೆಯನ್ನು ಗುರುತಿಸಿ ದಾಖಲಿಸುವ ಮಾದರಿಯದ್ದಾಗಿರುತ್ತದೆ.

## ೧.೩ ಅಧ್ಯಯನದ ವ್ಯಾಪ್ತಿ:

ಲೇಖಕಿಯರ ಮತ್ತು ವಾಚಕಿಯರ ಸಂಘವು ಹಲವು ಕ್ಷೇತ್ರಗಳ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ವೈವಿಧ್ಯಮಯವಾದ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಲೇಖಕಿಯರ ವಾಚಕಿಯರ ಸಂಘದ ಹುಟ್ಟು ಮತ್ತು ಬೆಳವಣಿಗೆ, ಸಂಘದ ಪ್ರಮುಖ ಚಟುವಟಿಕೆಗಳು ಜೊತೆಗೆ ಕರ್ನಾಟಕ ಕರಾವಳಿಯಲ್ಲಿ ಮಹಿಳಾಪರ ಚಿಂತನೆಗೆ ಪೂರಕ ಸನ್ನಿವೇಶಗಳಷ್ಟೇ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಹೀಗಾಗಿ ಈ ನಿಬಂಧದ ವ್ಯಾಪ್ತಿಯ ಬಹಳ ಸ್ಪಷ್ಟವಾಗಿದ್ದು, ಇದಕ್ಕೆ ಕೆಲವು ನಿರ್ದಿಷ್ಟ ಗ್ರಂಥಗಳು ಮತ್ತು ಸಂದರ್ಶನದಿಂದ ಪಡೆದ ಮಾಹಿತಿಗಳನ್ನೇ ಮೂಲ ಆಕರಗಳಾಗಿ ಬಳಸಿಕೊಳ್ಳಲಾಗಿದೆ.

# ೨. ಕರ್ನಾಟಕ ಕರಾವಳಿಯಲ್ಲಿ ಮಹಿಳಾಪರ ಚಿಂತನೆಗೆ ಪೂರಕ ಸನ್ನಿವೇಶಗಳು.

# ೨. ಕರ್ನಾಟಕ ಕರಾವಳಿಯಲ್ಲಿ ಮಹಿಳಾಪರ ಚಿಂತನೆಗೆ ಪೂರಕ ಸನ್ನಿವೇಶಗಳು

## ೨.೧. ಪ್ರವೇಶ

ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಿಂದ ಇಪ್ಪತ್ತನೇ ಶತಮಾನದ ನಂತರ ಶೈಕ್ಷಣಿಕ ಪ್ರಯೋಗದ ಫಲವಾಗಿ ಹಲವು ಕ್ಷೇತ್ರಗಳಲ್ಲಿ ಮಹಿಳೆ ತನ್ನನ್ನು ತೊಡಗಿಕೊಳ್ಳುವುದರ ಮೂಲಕ 'ನವ ಮಹಿಳೆ'ಯ ಉದಯವಾಯಿತು. ಈವರೆಗೆ ಮನೆವಾರ್ತೆಯಲ್ಲಿಯೇ ಮನೆಗೆ ಸೀಮಿತವಾದ ಹೆಣ್ಣು ತನ್ನ ಆಸಕ್ತಿಗಳನ್ನು ಮನೆಯಿಂದಾಚೆಗೆ ವಿಸ್ತರಿಸಿಕೊಳ್ಳತೊಡಗಿದಳು. ಸಮಾಜದಲ್ಲಿ ಇದ್ದಕ್ಕಿದ್ದಾಗೆ ಯಾವುದೇ ವ್ಯವಸ್ಥೆಯೂ ಬದಲಾಗುವುದಿಲ್ಲ ಇದು ಸಮಾಜಕ್ಕೆ ಅಗತ್ಯ ಎಂದೆನಿಸಿದರೆ ಮಾತ್ರ ಸಾಮಾಜಿಕ ಬದಲಾವಣೆಗೆ ಪೂರಕವಾದ ಚಿಂತನೆಗಳು ಹುಟ್ಟಿಕೊಳ್ಳಲು ಸಾಧ್ಯ. ಹೀಗೆ ಸಾಮಾಜಿಕ ನೆಲೆಯಲ್ಲಿ ಮಹಿಳೆಯ ಸ್ಥಾನಮಾನ ಬದಲಾಗಬೇಕು ಎಂಬ ಚಿಂತನೆ ಸ್ವಾತಂತ್ರ್ಯ ಪೂರ್ವದಲ್ಲಿಯೇ ಪ್ರಾರಂಭವಾಯಿತು. ಸ್ವಾತಂತ್ರ್ಯ ಪೂರ್ವದಲ್ಲಿ ನಡೆದ ಮಹಿಳಾಪರ ಕಾರ್ಯಗಳು ಪುರುಷರ ಮುಂದಾಳತ್ವದಲ್ಲಿ ಆರಂಭಗೊಂಡವು ನಂತರ ಕ್ರಮೇಣವಾಗಿ ಮಹಿಳೆಯರೇ ಎಲ್ಲಾ ಕ್ಷೇತ್ರಗಳಲ್ಲೂ ತಮ್ಮ ಅಸ್ಥಿತ್ವವನ್ನು ತೋರುವತ್ತ ಪ್ರಮುಖ ಪಾತ್ರವಹಿಸಿದರು. ಸ್ವಾತಂತ್ರ್ಯ ನಂತರದ ಎರಡೂವರೆ ದಶಕಗಳಲ್ಲಿ ಬಂದ ಹೊಸ ಪೀಳಿಗೆ ಪಡೆದ ಶಿಕ್ಷಣ, ಪ್ರಜಾಪ್ರಭುತ್ವಾಧಾರಿತ ಹಕ್ಕುಗಳು ತಮ್ಮ ಸುತ್ತಮುತ್ತವಿರುವ ಅಂಕುಡೊಂಕುಗಳನ್ನು ತಿದ್ದುವ, ತಿರಸ್ಕರಿಸುವ, ಬೇಕಾದುದನ್ನು ಪಡೆಯುವ, ಸೃಷ್ಟಿಸುವ ಕಾರ್ಯಕ್ಕೆ ಕೈ ಹಾಕುವಂತೆ ಪ್ರೇರೇಪಿಸುವುದರ ಜೊತೆ ಹೋರಾಟಗಳಲ್ಲಿ ತೊಡಗುವಂತೆ ಮಾಡಿತು. ಇದರೊಂದಿಗೆ ವಿವಿಧ ಕ್ಷೇತ್ರಗಳಲ್ಲಿ ತಮ್ಮದೇ ಆದ ಸಂಘಟನೆಗಳನ್ನು ಮಾಡಿಕೊಂಡು ತಮಗೂ ಪುರುಷರಷ್ಟೇ ಸಾಮರ್ಥ್ಯ ಮತ್ತು ಹಕ್ಕುಗಳಿವೆ. ಎಂದು ಜಗತ್ತಿಗೆಯೇ ತೋರಿಸುವತ್ತ ಗಮನ ಹರಿಯಿತು. ಈ ಎಲ್ಲಾ ಚಿಂತನೆಗಳು ಕರಾವಳಿಯಲ್ಲೂ ಪ್ರಭಾವ ಬೀರಿತು. ಇದರ ಫಲವಾಗಿಯೇ ಕರಾವಳಿಯಲ್ಲೂ ಹಲವು ಸಂಘಟನೆಗಳು ಹುಟ್ಟಿಕೊಂಡಿತು. ಸ್ವಾತಂತ್ರ್ಯ ಹೋರಾಟದಲ್ಲಿ ಮುಂದಾಳತ್ವ ವಹಿಸಿಕೊಂಡವರೇ ಮಹಿಳೆಯರ ಪರ ದನಿಎತ್ತಿದ್ದರು ಎಂಬುದನ್ನು ನೆನಪಿಕೊಳ್ಳಲಾಗುವುದು. ಅವರುಗಳಲ್ಲಿ ಮುಖ್ಯವಾಗಿ ರಾಜರಾಮ ಮೋಹನರಾಯ, ಈಶ್ವರಚಂದ್ರ ವಿದ್ಯಾಸಾಗರ್, ದಯಾನಂದ ಸರಸ್ವತಿ, ಜ್ಯೋತಿ ಬಾ ಪುಲೆ ಇನ್ನೂ ಮುಂತಾದ ಪ್ರಮುಖರು ಇವರುಗಳ ಜೊತೆಯಲ್ಲಿ ಸಮಾಜ ಸುಧಾಕರ ಪ್ರೋತ್ಸಾಹದೊಂದಿಗೆ ಮಹಿಳೆಯರ ಮುಂದಾಳುಗಳಾಗಿ ಕಸ್ತೂರ್‌ಬಾ, ಸಾವಿತ್ರಿ ಬಾಯಿ ಪುಲೆ, ಸರೋಜಿನಿ ನಾಯ್ಡು, ಕಮಲಾ ನೆಹರು, ಸುಚೇತಾ ಕೃಪಲಾನಿ, ಪ್ರಭಾವತಿದೇವಿ ಮೊದಲಾದವರ ಹೆಸರುಗಳು ಚಿರಸ್ಮರಣೀಯ ಇವರೆಲ್ಲರೂ ಮಹಿಳೆ ಅಬಲೆಯಲ್ಲ ಸಬಲಳು ಎಂಬುದನ್ನು ಸಾಧಿಸುವಂಥ ಕಾರ್ಯದಲ್ಲಿ ತೊಡಗಿಕೊಂಡವರು ಅಂಥ ಸಬಲೀಕರಣದ ಪ್ರಕ್ರೀಯೆ ಸ್ವಾತಂತ್ರ್ಯ ಪೂರ್ವದಲ್ಲಿಯೇ ಆರಂಭವಾಯಿತಾದರೂ ಸಾಮಾಜಿಕ ಹೋರಾಟಗಳಿಗೆ ಅಗತ್ಯವಾದಷ್ಟು ಒತ್ತಡಗಳನ್ನು ಸೃಷ್ಟಿಸುವಷ್ಟು ವ್ಯಾಪಕವಾಗಿರಲ್ಲಿಲ್ಲ. ಇವರೆಲ್ಲರ ಹೋರಾಟಗಳ ಜೊತೆಗೆ ಕರಾವಳಿಯಲ್ಲಿ ಪ್ರಗತಿಪರ ಚಿಂತನೆಗಳು ಮೂಡಲು ಕ್ರೈಸ್ತ ಮಿಶನರಿಗಳು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳು ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹಕೊಟ್ಟು, ಹೆಣ್ಣು ಮಕ್ಕಳಿಗಾಗಿಯೇ ಶಿಕ್ಷಣ ಸಂಸ್ಥೆಗಳನ್ನು ತೆರೆದು ಆ ಮೂಲಕ ಹೊರ ಜಗತ್ತಿಗೆ ಗುರುತಿಸಿಕೊಳ್ಳಲು ದಾರಿ ಮಾಡಿಕೊಟ್ಟಿತ್ತು.

ಕರಾವಳಿಯಲ್ಲಿ ಪಾಶ್ಚಾತ್ಯ ಶಿಕ್ಷಣ ಪದ್ದತಿಯ ಪ್ರಭಾವ, ಕ್ರೈಸ್ತ ಧರ್ಮದಲ್ಲಿನ ಮಾನವೀಯ ಮೌಲ್ಯಗಳು, ರಾಜಾರಾಂ ಮೋಹನರಾಯರ, ದಯಾನಂದ ಸರಸ್ವತಿಯರ ಕೃತಿಗಳ ಪ್ರಭಾವ ರಘುನಾಥಯ್ಯ, ನೀರೇಶ್ವಾಲ್ಯ ಅರಸಪ್ಪ,

ಭಾರಧ್ವಾಜ. ಶಿವರಾವ್, ಉಳ್ಳಾಲ ರಘುನಾಥಯ್ಯ, ಕುದ್ಮುಲ್ ರಂಗರಾವ್, ನಗರ ಆನಂದರಾವ್, ಪಂಡಿತ ಪರಮೇಶ್ವರಯ್ಯ, ಆನಂದರಾವ್, ಕಾರ್ನಾಡ್ ಸದಾಶಿವರಾವ್.ಆರ್. ಕಾರಂತ, ಲಕ್ಷ್ಮಣದೇವ ವಿದ್ಯಾರ್ಥಿ, ಸುಧಾಕರ ಚತುರ್ವೇದಿ, ಡಾ ಶಿವರಾಮ ಕಾರಂತ, ಅಪ್ಪುನಾಯಕ್, ರಾಮಚಂದ್ರ ನಾಯಕ್, ಪರಶುರಾಮ ನಾಯಕ್. ಮೋನಪ್ಪ ತಿಂಗಳಾಯ, ಪಂಡಿತ್ ಭವಾನಿಶಂಕರ, ಎಂ.ಎಸ್.ಏಕಾಂಬರ ರಾವ್, ಎಂ.ಮಾಧವ ರಾವ್, ಡಾ। ಕೆ. ಗಿರಿಧರ ರಾವ್, ವರದರಾಜ ರಾವ್, ಬೆನಗಲ್ ರಾಘವೇಂದ್ರ ರಾವ್, ಡಾ। ಎಂ.ಕೇಶವ ಪೈ, ನಯಂಪಳ್ಳಿ ರಾಮರಾವ್, ತೊಂಬಾಟ್ ಕೇಶವ ರಾವ್, ಅಕ್ಕಲ ರಾಘವೇಂದ್ರ ರಾವ್ ಇವರೆಲ್ಲರೂ ಜಾತಿ, ಮತ, ಪಂಥ, ವರ್ಣ, ಲಿಂಗಭೇದ ರಹಿತವಾದ ಸಮಾಜ ನಿರ್ಮಾಣವಾಗಬೇಕು ಎಂಬ ಪ್ರಗತಿಪರ ಮನೋಧರ್ಮವನ್ನು ಹೊಂದಿದ್ದು ಮಹಿಳೆಯ ವಿಚಾರದಲ್ಲೂ ವಿಧವಾ ವಿವಾಹಕ್ಕೆ ಪ್ರೋತ್ಸಾಹ ಕೊಡುವುದರ ಜೊತೆಗೆ ಅಂತರ್ಜಾತಿ ವಿವಾಹವನ್ನು ಮಾಡಿಸುವುದರ ಮೂಲಕ ಕರಾವಳಿಯಲ್ಲಿ ಪ್ರಗತಿಪರ ಚಿಂತನೆ ಹುಟ್ಟಿಕೊಳ್ಳಲು ಪ್ರೇರಣೆಯಾದವು. ಇವರ ಜೊತೆಯಲ್ಲಿ ಕೆಲವು ಮಹಿಳೆಯರೂ ಸಮಾಜ ಸುಧಾರಣಾ ಕಾರ್ಯದಲ್ಲಿ ಶ್ರಮಿಸಿದ್ದಾರೆ. ಮುಖ್ಯವಾಗಿ ಪದ್ಮಾಬಾಯಿ ಸಂಜೀವ ರಾವ್, ಲೀಲಾಬಾಯಿ ಏಕಾಂಬರ ರಾವ್, ರಮಾಬಾಯಿ ಮಾಧವರಾವ್, ಕಮಲಾದೇವಿ ಚಟ್ಟೋಪಾಧ್ಯಾಯ, ರತ್ನಾ ಜಿ.ಕೆ. ಶೆಟ್ಟಿ ಇವರೆಲ್ಲರು ಮಹಿಳಾಪರ ಚಿಂತನೆಗಳು ಕರಾವಳಿಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಹುಟ್ಟಲು ಕಾರಣಕರ್ತರಾಗಿದ್ದಾರೆ.

## ೨.೨. ಕರಾವಳಿಯ ಸಂಘಸಂಸ್ಥೆಗಳ ಪ್ರಭಾವ

### ೨.೨.೧. ಬ್ರಹ್ಮ ಸಮಾಜ

ಬ್ರಹ್ಮ ಸಮಾಜವು ಪಶ್ಚಿಮ ಬಂಗಾಳದಲ್ಲಿ ರಾಜಾರಾಮ್ ಮೋಹನ್ ರಾವ್‌ರವರಿಂದ ಕ್ರಿ.ಶ. ೧೮೨೮ರಲ್ಲಿ ಸ್ಥಾಪಿಸಲ್ಪಟ್ಟಿತ್ತು. ಪಾಶ್ಚಾತ್ಯ ಶಿಕ್ಷಣ ಪದ್ಧತಿಯಿಂದ ಪ್ರಭಾವಿತರಾಗಿ ಸಮಾಜದಲ್ಲಿ ಪ್ರಚಲಿತವಿದ್ದ ಸತಿಸಹಗಮನ ಪದ್ಧತಿಯಂತಹ ಸಾಮಾಜಿಕ ಆಚಾರಗಳ ವಿರುದ್ಧ ಬ್ರಹ್ಮ ಸಮಾಜ ಹೋರಾಡುತ್ತಿತ್ತು. ಕ್ರಮೇಣ ಈ ಸಂಸ್ಥೆಯು ಶಿಕ್ಷಿತ ಯುವ ಸಮುದಾಯವನ್ನು ಆಕರ್ಷಿಸಿತು. ಇದು ಮಂಗಳೂರಿನ ವಿದ್ಯಾವಂತ ಯುವಕರನ್ನೂ ಆಕರ್ಷಿಸಿತು. ಕ್ರಿ.ಶ. ೧೮೬೧ರ ವೇಳೆಯಲ್ಲಿ ಉಳ್ಳಾಲ ರಘುನಾಥಯ್ಯ, ನೀರೇಶ್ವಾಲ್ಯ ಅರಸಪ್ಪ, ಭಾರಧ್ವಾಜ, ಶಿವರಾವ್ ಮುಂತಾದ ವಿದ್ಯಾವಂತ ಯುವಕರು ತಮ್ಮ ಗೆಳೆಯರೊಂದಿಗೆ ಬಾಸೆಲ್ ಮಿಶನ್ ಶಾಲಾ ಗ್ರಂಥಾಲಯದ ವಾಚನಾಲಯದಲ್ಲಿ ಓದುಗರಾಗಿದ್ದರು. ಆ ಸಂದರ್ಭದಲ್ಲಿ ಕ್ರೈಸ್ತ ಧರ್ಮದಲ್ಲಿನ ಮಾನವೀಯ ಮೌಲ್ಯಗಳು, ರಾಜಾರಾಂ ಮೋಹನರಾಯರ ಕೃತಿಗಳಿಂದ ತೀವ್ರ ಪ್ರಭಾವಿತರಾಗಿ ಬ್ರಹ್ಮ ಸಮಾಜದ ಬಗ್ಗೆ ಒಲವು ಹೊಂದಿದ್ದರು. ಕಲ್ಕತ್ತಾ ಬ್ರಹ್ಮ ಸಮಾಜದಿಂದ ಪ್ರಕಟವಾಗಿ ಬರುತ್ತಿದ್ದ 'ಇಂಡಿಯನ್ ಮಿರರ್' ಎನ್ನುವ ವಾರಪತ್ರಿಕೆಯ ಚಂದಾದಾರರಾಗಿದ್ದರು. ಮಹರ್ಷಿ ದೇವೇಂದ್ರನಾಥ ಠಾಗೂರರ ಬ್ರಹ್ಮತತ್ವದ ಕುರಿತಾಗಿ ಬರೆದ ಹಲವು ಕೃತಿಗಳನ್ನು ಓದಿದ ಉಳ್ಳಾಲದ ರಘುನಾಥಯ್ಯನವರು ಮಂಗಳೂರಿನಲ್ಲಿ ಬ್ರಹ್ಮಸಮಾಜದ ಪ್ರಾರ್ಥನಾ ಮಂದಿರವೊಂದನ್ನು ಸ್ಥಾಪಿಸುವ ಯೋಜನೆ ಮಾಡಿದರು. ಇದಕ್ಕೆ ಇವರ ತಂದೆಯಾದ ಮಂಗೇಶಯ್ಯನವರು ಮಗನ ಈ ಒಲವನ್ನು ಬೆಂಬಲಿಸಿದರು. ಆ ಸಮಯದ ಸಮಾಜವು ಮೇಲು ಕೀಳೆಂಬ ಜಾತಿ ತಾರತಮ್ಯವನ್ನು ಅನುಸರಿಸುತ್ತಿತ್ತು. "ಸಮಾಜದಲ್ಲಿ ಬಲಾಢ್ಯರೆನಿಸಿದ ಮೇಲ್ವರ್ಗದವರು ಇತರ ಸಮುದಾಯವನ್ನು ಅಸ್ಪೃಶ್ಯರಂತೆ ನೋಡುವ ಸ್ಥಿತಿಗತಿಯಿತ್ತು. ದೇವಸ್ಥಾನಗಳು, ಶಾಲೆಗಳು, ಸರಕಾರಿ ಕಛೇರಿಗಳಿಗೆ ಮೇಲ್ವರ್ಗದವರಿಗೆ ಮಾತ್ರ ಪ್ರವೇಶವಿತ್ತು. ಇದರಿಂದ ನೊಂದ ಬಿಲ್ಲವ ಸಮಾಜದ ಮುಖಂಡರಾಗಿದ್ದ ನೀರೇಶ್ವಾಲ್ಯ ಅರಸಪ್ಪ ಇವರು ಬ್ರಹ್ಮಸಮಾಜದ ತತ್ವಗಳಿಂದ ಪ್ರಭಾವಿತರಾಗಿ ತಮ್ಮ ಸಮುದಾಯವನ್ನು ಒಗ್ಗೂಡಿಸಿ ಎಲ್ಲರೂ ಬ್ರಹ್ಮ ಸಮಾಜವನ್ನು

ಸೇರಲು ತೀರ್ಮಾನಿಸಿದರು."[೧]

ಇದರ ಫಲವಾಗಿ ಮಂಗಳೂರಿನಲ್ಲಿ ಸಾರಸ್ವತ ಸಮುದಾಯದ ಉಳ್ಳಾಲ ರಘುನಾಥಯ್ಯ ಹಾಗೂ ಬಿಲ್ಲವ ಸಮುದಾಯದ ನೀರೇಶ್ವಾಲ್ಯ ಅರಸಪ್ಪರ ನೇತೃತ್ವದಲ್ಲಿ ಕ್ರಿ.ಶ.೧೮೭೦ ಮೇ ತಿಂಗಳಿನಲ್ಲಿ ಬ್ರಹ್ಮ ಸಮಾಜದ ಶಾಖೆ ಸ್ಥಾಪನೆಗೊಂಡಿತು. ಸಾರಸ್ವತ ಬ್ರಾಹ್ಮಣರು ಭಿನ್ನವಾದ ಸಂಘಟನೆಯಲ್ಲಿರಲು ಬಯಸಿದರಿಂದ ಉಳ್ಳಾಲ ರಘುನಾಥಯ್ಯನವರು ನೇತೃತ್ವದಲ್ಲಿ ಸಾರಸ್ವತರ 'ಪ್ರಾರ್ಥನಾ ಸಮಾಜ' ಹುಟ್ಟಿಕೊಂಡಿತು. ಹೀಗೆ ಮಂಗಳೂರಿನಲ್ಲಿ ಅರಸಪ್ಪನವರ ನೇತೃತ್ವದ ಬ್ರಹ್ಮ ಸಮಾಜ ಮತ್ತು ರಘುನಾಥಯ್ಯ ನೇತೃತ್ವದ ಪ್ರಾರ್ಥನಾ ಸಮಾಜ ಹೀಗೆ ಎರಡು ಸಂಘಟನೆಗಳು ಪರಸ್ಪರ ಪೂರಕವಾಗಿ ಅಭಿಪ್ರಾಯ ವಿನಿಮಯದೊಂದಿಗೆ ಕಾರ್ಯನಿರ್ವಹಿಸತೊಡಗಿದ್ದವು. ೧೮೮೪ರಲ್ಲಿ ಪ್ರಾರ್ಥನಾ ಸಮಾಜವು ಆರಾಧನಾ ಕಟ್ಟಡ ನಿರ್ಮಿಸಿ ಜಾತಿ ಭೇದವಿಲ್ಲದೆ ಎಲ್ಲರಿಗೂ ಮುಕ್ತ ಪ್ರವೇಶ ಘೋಷಿಸಿತು. "೨೦ನೇ ಶತಮಾನ ಕಾಲಿಡುವ ವೇಳೆಗೆ ಸಾರಸ್ವತ ಸಮಾಜವು 'ಪ್ರಾರ್ಥನಾ ಸಮಾಜ' ಎನ್ನುವ ಹಳೆಯ ಹೆಸರನ್ನು ತ್ಯಜಿಸಿ 'ಬ್ರಹ್ಮಸಮಾಜ' ಎಂಬ ಹೆಸರನ್ನೇ ದಾಖಲಿಸಿಕೊಂಡಿತು. ಬ್ರಹ್ಮ ಸಮಾಜದ ಪ್ರಾರಂಭದಿಂದ ೩೫ ವರ್ಷಗಳಷ್ಟು ದೀರ್ಘಕಾಲದವರೆಗೂ ಉಳ್ಳಾಲ ರಘುನಾಥಯ್ಯನವರು ಕಾರ್ಯದರ್ಶಿಯಾಗಿ ದುಡಿದರು, ಮುಂದೆ ೧೯೦೫ರಲ್ಲಿ ಕುದ್ಮಲ್ ರಂಗರಾವ್ ಕಾರ್ಯದರ್ಶಿಯಾದರು. ಅವರೊಂದಿಗೆ ಕಾರ್ನಾಡ್ ಸದಾಶಿವರಾವ್ ಮುಂತಾದವರು ಬ್ರಹ್ಮಸಮಾಜದ ಅಭಿವೃದ್ಧಿಗಾಗಿ ದುಡಿದರು. ಈ ನಡುವೆ ಶ್ರೀ ನಾರಾಯಣ ಗುರುಗಳ ಪ್ರೇರಣೆಯಿಂದ ಮಂಗಳೂರು ಹಾಗೂ ತುಳುನಾಡಿನ ಬಿಲ್ಲವ ಸಮುದಾಯವು ಸಂಘಟನೆಯಿಂದ ಶಕ್ತಿ ಪಡೆಯಿರಿ ಶಿಕ್ಷಣದಿಂದ ಸ್ವಾತಂತ್ರ್ಯ ಪಡೆಯಿರಿ ಎನ್ನುವ ಸಂದೇಶದತ್ತ ಹೆಚ್ಚು ಒಲವು ತೋರಿತು".[೨]

ಹೀಗೆ ಬ್ರಹ್ಮಸಮಾಜವು ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡಲಾರಂಭಿಸಿತು. ಸಮಾಜದ ಸುಧಾರಣೆಗಾಗಿ ಹಲವು ಅಂಗಸಂಸ್ಥೆಗಳನ್ನೂ ಹುಟ್ಟು ಹಾಕಿತು. ಓದುವ ಆಸಕ್ತಿ ಇರುವವರೆಲ್ಲಾ ವಿದ್ಯಾವಂತರಾಗಬೇಕು ಎಂಬ ಉದ್ದೇಶವನ್ನಿಟ್ಟುಕೊಂಡು ಥೀಯಸ್ಟಿಕ್ ಲೈಬ್ರೆರಿ, ಸಂಗೀತಸಭಾ ಅಥವಾ ಆತ್ಮ ವಿದ್ಯಾಸಾಧಕ ಸಂಘ, ದಿ ಥೀಯಸ್ಟಿಕ್ ಕ್ಲಬ್, ಮಕ್ಕಳಿಗಾಗಿ ಭಾನುವಾರದ ತರಗತಿಗಳು, ಹೆಮ್ಮಕ್ಕಳಿಗಾಗಿಯೇ ರಾಂಮೋಹನ್‌ರಾಯ್ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿತು. ಇದರ ಜೊತೆ ಪಂಚಮಾ ಪ್ರೈಮರಿ ಸ್ಕೂಲ್, ದಬ್ರಹ್ಮಿಕಸಭಾ ಇಂತಹ ಹಲವು ಅಂಗಸಂಸ್ಥೆಗಳನ್ನು ಸ್ಥಾಪಿಸಿತು. ಹೀಗೆ ಕರಾವಳಿಯಲ್ಲಿ ಮಹಿಳೆಯರೇ ಸಂಘಟಿತರಾಗಲೂ ಬ್ರಹ್ಮಸಮಾಜವೂ ಒಂದು ಪರೋಕ್ಷವಾಗಿ ಕಾರಣವಾಗಿದೆ. ಕರಾವಳಿಯಲ್ಲಿ ಹೆಣ್ಣು ಮಕ್ಕಳಿಗೂ ಶಿಕ್ಷಣ ಲಭ್ಯ ಆಗಬೇಕು. ಆ ಮೂಲಕ ಹೆಣ್ಣು ಮಕ್ಕಳೂ ಸಮಾಜಮುಖಿ ಕಾರ್ಯದಲ್ಲಿ ತೊಡಗಿ ಸ್ವಾವಲಂಬಿಗಳಾಗಬೇಕು ಎಂಬ ಮಹತ್ವಕಾಂಕ್ಷೆ ಹೊಂದಿತ್ತು.

### ೨.೨.೨ ಥಿಯೋಸಾಫಿಕಲ್ ಸೊಸೈಟಿ

"ಕ್ರಿ.ಶ.೧೮೭೫ರ ನವೆಂಬರ್ ೧೭ರಂದು ನ್ಯೂಯಾರ್ಕ್ ನಗರದಲ್ಲಿ ಥಿಯೋಸಾಫಿಕಲ್ ಸೊಸೈಟಿಯು ಜನ್ಮತಾಳಿತು. ಅದರ ಉದ್ದೇಶ ವಿಶ್ವಭ್ರಾತೃತ್ವ ಭಾವದ ಸಮಾಜ ನಿರ್ಮಾಣವಾಗುವುದು. ಯಾವುದೇ ಜಾತಿ, ಮತ, ಪಂಥ, ವರ್ಣ, ಲಿಂಗಭೇದ ರಹಿತವಾದ ವಿಶಾಲ ಸಮುದಾಯದ ಕಲನೆಯೊಂದಿಗೆ, ಧರ್ಮತತ್ವ ಹಾಗೂ ವಿಜ್ಞಾನದ ಅಂತರ್‌ಶಿಸ್ತೀಯ ಅಧ್ಯಯನವನ್ನು ಉತ್ತೇಜಿಸುವುದು. ಸರ್ವಧರ್ಮ ಸಮನ್ವಯದಲ್ಲಿರುವ ಸಮಾನಾಂಶವನ್ನು ಅರಿಯುವುದು. ಇನ್ನೂ ಉತ್ತರ ದೊರೆಯಲಾರದ ಮಾನವನ ಅಂತರಂಗದಲ್ಲಿ ಅಡಗಿರುವ ನೈಸರ್ಗಿಕ ಸಾಮರ್ಥ್ಯವನ್ನು ಶೋಧಿಸುವುದು."[೩] ಈ ಎಲ್ಲಾ ಉದ್ದೇಶಗಳನಿಟ್ಟುಕೊಂಡು ಸ್ಥಾಪನೆಗೊಂಡ ಸಂಸ್ಥೆಯಾಗಿದೆ. ೧೯೦೧ರಲ್ಲಿ ಇದರ ಪ್ರಧಾನ ಕೇಂದ್ರ ಮುಂಬಯಿಗೆ

ವರ್ಗಾವಣೆ ಹೊಂದಿತು. ಬಳಿಕ ತಮಿಳುನಾಡಿನ ಅಡ್ಯಾರಿಗೆ ಇದರ ಪ್ರಧಾನ ಕಛೇರಿ ಸ್ಥಳಾಂತರಗೊಂಡಿತು.

ಮಂಗಳೂರಿನ ಥಿಯೋಸಾಫಿಕಲ್ ಸೊಸೈಟಿಯನ್ನು ೧೩-೦೮-೧೯೦೧ರಲ್ಲಿ ಪಿ.ವಿ.ಎಸ್. ಬಳಿ ಸ್ಥಾಪನೆ ಮಾಡಲಾಯಿತು. ಮಂಗಳೂರಿನಲ್ಲಿ ಈ ಸಂಸ್ಥೆಯ ಶಾಖೆ ಪ್ರಾರಂಭವಾಗಬೇಕೆಂಬ ಆಸಕ್ತಿ ತೋರಿದವರು ಬೆನಗಲ್ ಸಂಜೀವರಾವ್. ಪದ್ಮಾಬಾಯಿ ಸಂಜೀವ ರಾವ್, ಲೀಲಾಬಾಯಿ ಏಕಾಂಬರರಾವ್, ಎಂ. ಮಾಧವ ರಾವ್, ಡಾ। ಕೆ. ಗಿರಿಧರ ರಾವ್ ಮುಂತಾದ ಮಹನೀಯರು ಸಂಸ್ಥೆಯ ಉನ್ನತಿಗಾಗಿ ಶ್ರಮಿಸಿದ್ದಾರೆ ಎಂದು ದಾಖಲೆಗಳಲ್ಲಿ ದೃಢೀಕರಿಸಲಾಗಿದೆ.

ಮಂಗಳೂರಿಗೆ ೧೯೦೯ ಮತ್ತು ೧೯೧೮ರಲ್ಲಿ ಹೀಗೆ ಎರಡು ಬಾರಿ ಅನಿಬೆಸೆಂಟರು ಭೇಟಿ ನೀಡಿದ್ದಾರೆ. ಈ ಸಂದರ್ಭದಲ್ಲಿ ಮಹಿಳೆಯರಿಗೆ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನಿಡಬೇಕು ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಅದರಂತೆ ೧೭-೦೬-೧೯೧೮ರಲ್ಲಿ ಹೆಣ್ಣು ಮಕ್ಕಳಿಗಾಗಿ ನ್ಯಾಶನಲ್ ಗರ್ಲ್ಸ್ ಸ್ಕೂಲ್‌ನ್ನು ಸ್ಥಾಪನೆ ಮಾಡಲಾಗಿದೆ. ಥಿಯೋಸಾಫಿಕಲ್ ಸೊಸೈಟಿಗೆ ಭೇಟಿಯಿತ್ತ ಮಹನೀಯರಲ್ಲಿ ರವೀಂದ್ರನಾಥ ಠಾಕೂರ್, ಡಾ। ಸಿ. ರಾಜಗೋಪಾಲಾಚಾರಿ, ಸರ್.ಮಿರ್ಜಾ ಇಸ್ಮಾಯಿಲ್ ಮುಂತಾದವರು. ಮಹಿಳೆಯರಿಗೆ ಸಾರ್ವಜನಿಕ ಜೀವನದಲ್ಲಿ ಹೊಸ ಘನತೆ, ಗೌರವ, ಸಮಾಜದ ಮುಖ್ಯವಾಹಿನಿಯಲ್ಲಿ ಹೊಸ ಸ್ಥಾನಮಾನ, ಹೊಸ ಆತ್ಮವಿಶ್ವಾಸ, ಬರಲು ಈ ಸಂಸ್ಥೆ ಹಲವು ರೀತಿಯಲ್ಲಿ ಕಾರ್ಯಗಳನ್ನು ಹಮ್ಮಿಕೊಂಡಿದೆ.

### ೨.೨.೩. ಮಂಗಳೂರು ಮಹಿಳಾ ಸಭಾ:

ಮಂಗಳೂರಿನ ಗಂಡು ಹೆಣ್ಣುಗಳ ನಡುವಣ ಸಂಬಂಧಗಳಲ್ಲಿ ಅಡಗಿದ ದಾಸ್ಯ ಮನೋಭಾವ ಅರ್ಥವಿಲ್ಲದ ಕಂದಾಚಾರ ಮತ್ತು ಸಾಮಾಜಿಕ ಅನಿಷ್ಟಗಳು, ಮಹಿಳೆಯರಲ್ಲಿ ಕೀಳರಿಮೆಯ ಮನೋಭಾವ ಬೆಳೆದಿತ್ತು. ಇಂಗ್ಲೀಷ್ ಶಿಕ್ಷಣ ಮತ್ತು ಸುಧಾರಣಾವಾದಿ ಚಳವಳಿಗಳಿಂದಾಗಿ ಹೆಣ್ಣಿನ ಕುರಿತ ಚಿಂತನೆಯ ಮೇಲೂ ಪ್ರಭಾವ ಬೀರಿತು. ಅದುವರೆಗೆ ಮಹಿಳೆಯರಿಗೆ ವಿದ್ಯಾಭ್ಯಾಸವೆನ್ನುವುದು ಗಗನಕುಸುಮವಾಗಿದ್ದವು. ಬಾಲ್ಯವಿವಾಹ, ವಿಧವೆಯ ದುಸ್ಥಿತಿ, ಸತಿಪದ್ಧತಿಗಳು ಅನುಭವಿಸಲೇಬೇಕಾದ ಅನಿವಾರ್ಯ ಸ್ಥಿತಿಯೆನಿಸಿದುದ್ದು ಸಮಾಜ ಕಂಟಕ ಎಂದು ಗೋಚರಿಸಿತು. ಈ ಅರಿವನ್ನುಂಟು ಮಾಡಿಸಿ ಮಹಿಳೆಯನ್ನು ದೌರ್ಜನ್ಯದಿಂದ ಮುಕ್ತರನ್ನಾಗಿಸಿದವರಲ್ಲಿ ಇಂಗ್ಲೀಷ್ ಶಿಕ್ಷಣ ಪಡೆದ ಮಹನೀಯರು ಹಲವರು ಇವರ ಪ್ರೋತ್ಸಾಹ ಪ್ರೇರಣೆಯಿಂದ ಮಹಿಳೆಯರು ತಮ್ಮದೇ ಆದ ಸಂಘಟನೆ ಅಗತ್ಯವೆಂದು ಮನಗಂಡರು. ಹೀಗೆ ಮಂಗಳೂರಿನಲ್ಲಿ ೧೯೧೧ರ ಮೇ ತಿಂಗಳಿನಲ್ಲಿ ಮಹಿಳಾ ಸಭಾ ಅಸ್ತಿತ್ವಕ್ಕೆ ಬಂದಿತು. ಸಂಘಟನೆಯ ಮೂಲಕ ಮಂಗಳೂರು ಪ್ರದೇಶದ ವಿವಿಧ ವರ್ಗಗಳ ಮಹಿಳೆಯರನ್ನು ಶೈಕ್ಷಣಿಕ, ಸಾಮಾಜಿಕ ಸೇವಾ ಮತ್ತು ಸಾಂಸ್ಕೃತಿಕ ನೆಲೆಗಳಿಂದ ಒಂದುಗೂಡಿಸಲು ಸಾಧ್ಯ. ಮನೆಯಿಂದ ಹೊರಹೋಗಿ ಮಹಿಳೆಯರು ಪರಸ್ಪರ ಒಟ್ಟಾಗಿ ಬೆರೆಯುವುದು ಆಗಿನ ಕಾಲದಲ್ಲಿ ಸಾಹಸದ ಕಾರ್ಯವೇ ಆಗಿತ್ತು. ಇಂತಹ ಸಂದರ್ಭದಲ್ಲಿ "ಬೆನಗಲ್ ಸಂಜೀವ ರಾವ್, ಕಾರ್ನಾಡ್ ಸದಾಶಿವ ರಾವ್, ತೊಂಬಾಟ್ ಕೇಶವರಾವ್ ಮತ್ತು ಗೊಲ್ಲರಕೇರಿ ಕೃಷ್ಣರಾವ್‌ನಂತಹ ಮಹನೀಯರು ಬೆಂಗಾವಲಾಗಿ ಪ್ರೋತ್ಸಾಹಿಸುತ್ತಿದ್ದ ಕಾರಣದಿಂದಾಗಿ ಮಂಗಳೂರಿನಲ್ಲಿ ಮಹಿಳಾ ಸಭಾ ಸ್ಥಾಪನೆಗೊಂಡಿತು"[೪]. ಈ ಸಂಘಟನೆಯ ಮೊದಲ ಅಧ್ಯಕ್ಷರಾಗಿ ಧಾರೇಶ್ವರ್ ಗಿರಿಜಾಬಾಯಿ, ಕಾರ್ಯದರ್ಶಿಯಾಗಿ ಕಾರ್ನಾಡ್ ಶಾಂತಾಬಾಯಿ ಆಯ್ಕೆಗೊಂಡರು. ಪ್ರಾರಂಭದ ದಿನಗಳಲ್ಲಿ ಅಧ್ಯಕ್ಷರ ಮನೆಯಲ್ಲಿಯೇ ಸಭೆ ಸೇರಿ ಶೈಕ್ಷಣಿಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಉಪನ್ಯಾಸಗಳನ್ನು ನಡೆಸುವುದು. ಇಂಗ್ಲೀಷ್, ಸಂಗೀತ, ಕಸೂತಿ ಕಲಿಕೆ ತರಬೇತಿಗಳನ್ನು ಏರ್ಪಡಿಸುವುದು ನಡೆಸಲಾಗುತ್ತಿತ್ತು"[೫] ಎಂದು ದಾಖಲೆಗಳು ತಿಳಿಸುತ್ತವೆ.

ತರಗತಿಗಳು ಮತ್ತು ಉಪನ್ಯಾಸಗಳು ಹೆಚ್ಚು ಹೆಚ್ಚು ಮಹಿಳೆಯರನ್ನು ಆಕರ್ಷಿಸುತ್ತಿದ್ದ ಕಾರಣದಿಂದಾಗಿ ಒಂದು

ಶಾಶ್ವತ ಕಟ್ಟಡ ಮಹಿಳಾ ಸಭಾಕ್ಕೆ ಅನಿವಾರ್ಯವೆನಿಸಿದ ಕಾರಣ ಲೈಟ್‌ಹೌಸ್ ಹಿಲ್‌ನಲ್ಲಿ ಮಹಿಳಾಸಭಾದ ಕಟ್ಟಡ ತಲೆ ಎತ್ತಿನಿಂತಿತು. ಮಹಿಳಾ ಸಭಾ ಕಾಲಕಾಲಕ್ಕೆ ಜನಪ್ರಿಯವಾಗಿ ಅಭಿವೃದ್ಧಿ ಪಡೆಯುವ ಸಂದರ್ಭದಲ್ಲಿ ಸದಸ್ಯೆಯರೆಲ್ಲರೂ ೧೯೨೧ರಿಂದ ತಿಂಗಳಿಗೆ ನಾಲ್ಕಾಣೆ ಸದಸ್ಯ ಶುಲ್ಕವನ್ನು ಮತ್ತು ಒಂದು ರೂ. ಪ್ರವೇಶಧನವನ್ನು ನಿಗದಿಗೊಳಿಸಿದರು. ದಿನಗಳುರುಳಿದಂತೆ ಪ್ರವೇಶ ಶುಲ್ಕ ೨೦ ರೂ.ಗಳಾಗಿ ಮಾರ್ಪಾಟು ಹೊಂದಿತು. ಮುಂದೆ ಮಹಿಳಾ ಸಭಾದ ಬೆಳವಣಿಗೆಯ ಜನಪ್ರಿಯತೆಯಿಂದಾಗಿ ಮಹಿಳಾ ಸಭಾ ಸಮಿತಿಯ ಸದಸ್ಯರು ಉತ್ತೇಜಿತರಾದರು. ಸಮಿತಿ ಸದಸ್ಯರಾಗುವವರಿಗೆ ಒಂದು ರೂಪಾಯಿ ಪ್ರವೇಶ ಶುಲ್ಕ ಹಾಗೂ ಪ್ರತೀ ತಿಂಗಳಿಗೆ ನಾಲ್ಕು ರೂ.ಗಳ ಸದಸ್ಯ ಶುಲ್ಕ ನಿಗದಿಪಡಿಸಲು ನಿರ್ಧರಿಸಿದರು. ಆದರೆ ಆ ಬಳಿಕ ೨೦೦೨ರ ಕಾಲಕ್ಕೆ ಸದಸ್ಯ ಶುಲ್ಕವನ್ನು ತಿಂಗಳಿಗೆ ಇಪ್ಪತ್ತು ರೂಪಾಯಿಗೆ ಏರಿಸಿದರು.

ಮಹಿಳಾ ಸಭಾಕ್ಕೆ ೧೯೨೧ರಲ್ಲಿ ಸರಕಾರದಿಂದ ಅನುದಾನ ಲಭ್ಯವಾದ ಕಾರಣ ಸಂಘದಲ್ಲಿ ಗ್ರಂಥ ಭಂಡಾರ ಆರಂಭವಾಗಿ ೧೯೩೦ರಲ್ಲಿ ಓದಲು ಕೊಠಡಿಯನ್ನು ನಿರ್ಮಿಸಿದರು. ಸಂಘದಲ್ಲಿ ಹಲವಾರು ಮನೋರಂಜನಾ ಚಟುವಟಿಕೆಗಳನ್ನು, ಹಲವು ತರಬೇತಿ, ತರಗತಿಗಳನ್ನು ನಡೆಸಲಾಗುತ್ತಿತ್ತು. ಮುಖ್ಯವಾಗಿ ಆಂಗ್ಲ, ಹಿಂದಿ ತರಗತಿಗಳು, ಕಸೂತಿಕಲೆ, ಬುಟ್ಟಿ ಹೆಣಿಗೆ, ಸಂಗೀತ, ಚಿತ್ರಕಲೆ, ಅಡುಗೆ ಕಲೆ ತರಗತಿ ಹೀಗೆ ಹಲವು ಉಪಯುಕ್ತ ಚಟುವಟಿಕೆಯ ಜೊತೆಗೆ ಬ್ಯಾಡ್‌ಮಿಂಟನ್, ಪಿಂಗ್‌ಪಾಂಗ್ ಆಟ, ಟೆನ್ನಿಸ್, ಟೆನ್ನಿಕ್ವೊಟ್ಸ್, ಕ್ಯಾರಮ್ ಹೀಗೆ ಮೊದಲಾದ ಚಟುವಟಿಕೆಯಲ್ಲಿ ತೊಡಗಿಕೊಂಡಿತು. ಇದರ ಜೊತೆ ಕಾಲಕಾಲಕ್ಕೆ ಉಪನ್ಯಾಸಗಳನ್ನು, ವಿಚಾರಸಂಕಿರಣಗಳನ್ನು ನಡೆಸುವುದರ ಜೊತೆ ಜೊತೆಗೆ ಮಹಿಳೆಯರ ಪ್ರತಿಭಾ ಕೌಶಲಗಳ ಪ್ರದರ್ಶನ ಮಾಡಲಾಗುತ್ತದೆ. ಹೀಗೆ ಮಹಿಳಾ ಸಭಾ ಒಂದು ವಿಶಿಷ್ಟ ಶಕ್ತಿ ಸ್ವರೂಪ ಶಾಲೆಯಾಗಿ ಬೆಳಕಿಗೆ ಬಂದಿದೆ.

ಆರಂಭದ ದಿನಗಳಿಂದಲೂ ಮಹಿಳೆಯರ ಸಮಾವೇಶ ಏರ್ಪಡಿಸುವಾಗ ಕೆಲವೊಂದು ವಿಶಿಷ್ಟ ದಿನದ ಸಂದರ್ಭಗಳಲ್ಲಿ ಮಹಿಳೆಯರು ಪುಷ್ಪ ಪ್ರದರ್ಶನ, ವಸ್ತು ಪ್ರದರ್ಶನ ನಡೆಸುತ್ತಿದ್ದರು. ಇದರ ಜೊತೆಗೆ ಬೇರೆ ಬೇರೆ ಕಲ್ಯಾಣನಿಧಿಗಳಿಗೆ ಆರಂಭದ ಕಾಲದಿಂದಲೇ ಧನಸಹಾಯ ನೀಡುತ್ತಲೇ ಸಂಘ ಬಂದಿದೆ. ೧೯೧೧ರಲ್ಲಿ ಪ್ರೊ. ಕರ್ವೆಯರ ವಿಧವಾಶ್ರಮಕ್ಕೆ, ಹಿಂದುಳಿದ ವರ್ಗದ ಹೆಮ್ಮಕ್ಕಳ ಶಾಲೆಗಳಿಗೆ ಬ್ಯಾಡ್‌ಮಿಂಟನ್ ಕೋರ್ಟ್ ವ್ಯವಸ್ಥೆಗೊಳಿಸಲು ಮತ್ತು ಪರಿಶಿಷ್ಟ ವರ್ಗದ ಬಾಲಕಿಯರಿಗಾಗಿ ವಿದ್ಯಾರ್ಥಿವೇತನ ನೀಡಲು ಸ್ಥಳೀಯ–ಪ್ರಾದೇಶಿಕ–ರಾಷ್ಟ್ರೀಯ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ೧೯೬೨ರಲ್ಲಿ ಚೀನಿಯರು ಭಾರತದ ಮೇಲೆ ಅತಿಕ್ರಮ ನಡೆಸಿದಾಗ ಗಡಿ ಪ್ರದೇಶದ ಜನರಿಗಾಗಿ ಸದಸ್ಯೆಯರಿಂದ ೨೨೫ ಗ್ರಾಂ ಚಿನ್ನ ಸಂಗ್ರಹಿಸಿ ಬಟ್ಟೆ ಹೊಲಿದು ಕಳುಹಿಸಿಕೊಟ್ಟಿರುವುದು ನಿರಾಶ್ರಿತರಿಗೂ ನೆರವನ್ನು ಸಮಿತಿ ನೀಡಿರುವುದನ್ನು ಸಂಘದ ದಾಖಲೆಗಳು ದೃಢೀಕರಿಸುತ್ತದೆ.

ಕ್ಷೇಮಾಭಿವೃದ್ಧಿ ಚಟುವಟಿಕೆಗಳಲ್ಲಿ ಮಹಿಳಾ ಸಭಾ ಪಾಲುಗೊಂಡು ನಗರದ ವಿವಿಧ ಸಂಸ್ಥೆಗಳಾದ ಭಗಿನಿಸಮಾಜ, ಗಿಲ್ಡ್ ಆಫ್ ಸರ್ವಿಸ್, ಕರಾವಳಿ ಅಂಧರ ಸೌತ್ ಕೆನರಾ ಅಸೋಸಿಯೇಶನ್ ಹಾಗೂ ಶಿಕ್ಷಣಕ್ಕಾಗಿ ನೆರವು, ಅಗತ್ಯವಿರುವ ಇನ್ನಿತರ ಅಪೇಕ್ಷಿತ ಜನ ಸಾಮಾನ್ಯ ಪ್ರಜೆಗಳಿಗೆ ಗ್ರಂಥಗಳನ್ನು ದಾನ ನೀಡುವ ಕಾಯಕದಲ್ಲಿಯೂ ತೊಡಗಿಕೊಂಡಿದೆ. 'ಮಹಿಳಾಸಭಾ'ವೆನ್ನುವುದು ಬೇರೆ ಬೇರೆ ಕಾಲಘಟ್ಟಗಳ ವಿವಿಧ ಮಹಿಳೆಯರ ಸಹಕಾರ ತತ್ವದ ಸಾಧನೆಗಳ ಪ್ರತಿಫಲ. ಮಂಗಳೂರು ನಗರದಲ್ಲಿ ಅಸಂಖ್ಯಾತ ಸಮುದಾಯಗಳಿದ್ದು ಪರಸ್ಪರ ಸುಖ ಸೌಹಾರ್ದ ಸ್ನೇಹ ಭಾವನೆಗಳನ್ನು ಹಂಚಿಕೊಳ್ಳುವ ಉದ್ದೇಶದಿಂದಲೇ ಈ ಸಂಘ ಸ್ಥಾಪನೆಗೊಂಡಿದೆ. ಮಂಗಳೂರಿನ ಪ್ರೌಢ ನಾಗರಿಕ ಮಹಿಳೆಯರಿಗೆ ಸಕ್ರಿಯಾತ್ಮಕ ಮನೋರಂಜನೆಯೊಂದಿಗೆ ಉಪಯುಕ್ತ ಶಿಕ್ಷಣವನ್ನು ನೀಡುವುದರಲ್ಲಿ ಪ್ರಮುಖ ಪಾತ್ರ ವಹಿಸಿದೆ.

### ೨.೨.೪. ಆರ್ಯಸಮಾಜ:

ಮಹರ್ಷಿ ದಯಾನಂದರು ಸ್ಥಾಪಿಸಿದ ಸಂಸ್ಥೆ ಆರ್ಯ ಸಮಾಜ ಅದರ ಶಾಖೆಯನ್ನು ಮಂಗಳೂರಿನಲ್ಲಿ ೧೯೧೬ರಲ್ಲಿ ಜಿಲ್ಲೆಯ ಅಂದಿನ ಕೆಲವು ಗಣ್ಯ ವ್ಯಕ್ತಿಗಳು ಪ್ರಾರಂಭಿಸಿದರು. ಅವರುಗಳಲ್ಲಿ ಕೆ. ಆರ್. ಕಾರಂತ, ಕುದ್ಮಲ್ ರಂಗರಾವ್, ಕಾರ್ನಾಡ್ ಸದಾಶಿವ ರಾವ್, ಕಮಲಾದೇವಿ ಚಟ್ಟೋಪಾಧ್ಯಾಯ, ಲಕ್ಷ್ಮಣದೇವ ವಿದ್ಯಾರ್ಥಿ. ಸುಧಾಕರ ಚತುರ್ವೇದಿ, ಡಾ। ಶಿವರಾಮ ಕಾರಂತ. ಅಪ್ಪು ನಾಯಕ್, ರಾಮಚಂದ್ರ ನಾಯಕ್, ಪರಶುರಾಮ ನಾಯಕ್, ಮೋನಪ್ಪ ತಿಂಗಳಾಯ ಮುಂತಾದ ಗಣ್ಯರು. ಪ್ರಥಮವಾಗಿ ಯು.ಸಿ.ಎಸ್. ಭಟ್ಟರವರು ಈ ಸಮಾಜದ ಅಧ್ಯಕ್ಷರಾಗಿಯೂ, ಕೆ.ಆರ್. ಕಾರಂತರು ಕಾರ್ಯದರ್ಶಿಯಾಗಿದ್ದರು.

"ಮಂಗಳೂರಿನಲ್ಲಿ ಆರ್ಯಸಮಾಜದ ವತಿಯಿಂದ ಶ್ರದ್ಧಾನಂದ ಅನಾಥಶ್ರಮವನ್ನು ಸ್ಥಾಪನೆ ಮಾಡುವ ಮೂಲಕ ಅನಾಥ ಮಕ್ಕಳಿಗೆ ರಕ್ಷಣೆ ನೀಡುವ ಕಾರ್ಯ ನಡೆಸಿತು. ಇದರ ಜೊತೆಗೆ ಧರ್ಮದ ರಕ್ಷಣೆ, ವೇದಗಳ ಕೊರತೆಯಿಂದ, ಪಾಶ್ಚಾತ್ಯ ಸಮಾಜದ ಆಕ್ರಮಣದಿಂದ, ಲಾರ್ಡ್ ಮೆಕಾಲೆಯ ಶಿಕ್ಷಣ ಕ್ರಮದಿಂದ, ವೈದಿಕ ಧರ್ಮದಲ್ಲಿ ಬೆಳೆದಿರುವ ಅಜ್ಞಾನ ಮೂಢನಂಬಿಕೆಗಳ ನಿವಾರಣೆ ಜೊತೆ ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹ ನೀಡುವ ಕಾರ್ಯವನ್ನು ಸಂಸ್ಥೆಯ ವತಿಯಿಂದ ನಡೆಯಿತು".[೬]. ಈ ಸಮಾಜವು ಕರಾವಳಿಯಲ್ಲಿ ಜನರನ್ನು ಉತ್ತಮ ನಾಗರಿಕರನ್ನಾಗಿ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದೆ.

### ೨.೨.೫. ಈಶ್ವರಾನಂದ ಮಹಿಳಾ ಸೇವಾಶ್ರಮ ಸೊಸೈಟಿ:

ಅಸಹಾಯಕ ಹೆಣ್ಣುಗಳು ಮತ್ತು ಮಕ್ಕಳ ಸಂರಕ್ಷಣೆಯ ಉದ್ದೇಶದಿಂದ ಬೆನಗಲ್ ರಾಘವೇಂದ್ರ ರಾವ್ ಮುಂದಾಳತ್ವದಲ್ಲಿ ಸಾಮಾಜಿಕ ಕಾರ್ಯಕರ್ತರನ್ನು ಒಳಗೊಂಡ ತಂಡದಿಂದಾಗಿ ೧೯೨೮ರಲ್ಲಿ ಈಶ್ವರಾನಂದ ಮಹಿಳಾ ಸೇವಾಶ್ರಮ ಸೊಸೈಟಿ ಪ್ರಾರಂಭಗೊಂಡಿತು. ಕುದ್ಮಲ್ ರಂಗರಾಯರು ಸನ್ಯಾಸತ್ವ ಸ್ವೀಕರಿಸಿದ ಬಳಿಕ 'ಸ್ವಾಮಿ ಈಶ್ವರಾನಂದ' ಎಂಬ ಹೆಸರು ಪಡೆದರು. ಈ ಹೆಸರನ್ನೇ ಮಹಿಳಾ ಸೇವಾಶ್ರಮಕ್ಕೆ ಇಡಲಾಗಿದೆ. ಈ ಸಂಸ್ಥೆ ಯಾವುದೇ ಜಾತಿಮತ, ಭೇದವಿಲ್ಲದೆ ಅಸಹಾಯಕರಿಗೆ ರಕ್ಷಣೆ ನಿರ್ಗತಿಕ ಮತ್ತು ಅನಾಥ ಬಾಲಕಿಯರ ಸಂರಕ್ಷಣಾ ಕಾರ್ಯದಲ್ಲಿ ಪ್ರಧಾನ ಪಾತ್ರವಹಿಸುತ್ತಿತ್ತು. ಇವರೆಲ್ಲರೂ ಮುಂದೆ ಸಮಾಜದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡು ಸಮಾಜದ ಅತ್ಯುತ್ತಮ ಸದಸ್ಯರಾಗುವಂತೆ ಸಂಸ್ಥೆ ಬಲ ನೀಡುತ್ತಿತ್ತು.

"ಹೆಸರುವಾಸಿಯಾದ ಮತ್ತು ಅತ್ಯಂತ ಗೌರವಾನ್ವಿತರಾದ ವ್ಯಕ್ತಿಗಳೆನಿಸಿಕೊಂಡ ಡಾ। ಎಂ. ಕೇಶವ ಪೈ, ನಯಂಪಳ್ಳಿ ರಾಮರಾವ್, ತೊಂಬಾಟ್ ಕೇಶವ ರಾವ್ ಮತ್ತು ಅರ್ಕಲ್ ರಾಘವೇಂದ್ರ ರಾವ್ ಇವರುಗಳು ಸೊಸೈಟಿಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು ಮತ್ತು ಸಂಸ್ಥೆ ಬೆಳವಣಿಗೆ ಹೊಂದಲು ನಯಂಪಳ್ಳಿ ಸಹೋದರರು. ಎನ್. ಶಿವರಾವ್, ಕೆ.ಸಿ. ಪ್ರಭು, ಶಾಂತೇರಿ ಪ್ರಭು ಇವರೆಲ್ಲರನ್ನು ಸ್ಮರಿಸಲಾಗುವುದು".[೭]

ಈಶ್ವರಾನಂದ ಮಹಿಳಾ ಸೇವಾಶ್ರಮ ಬಾಲಿಕಾಶ್ರಮ ಮತ್ತು ನಿರ್ಗತಿಕರ ಮನೆಗಳು ಎಂಬ ಎರಡು ಅಂಗಸಂಸ್ಥೆಗಳನ್ನು ಹೊಂದಿದೆ.

**ಬಾಲಿಕಾಶ್ರಮ:**

ಬಾಲಿಕಾಶ್ರಮವನ್ನು ೨೮-೧೧-೧೯೨೮ರಂದು ಆರಂಭಿಸಲಾಗಿದ್ದು ಇದೀಗ ಈ ಆಶ್ರಮದಲ್ಲಿ ಸರಾಸರಿ ೭೦ ಹುಡುಗಿಯರಿದ್ದಾರೆ. ಆರ್ಥಿಕವಾಗಿ ಹಿಂದುಳಿದ ಸಮಾಜದ ೫೧/೨ ವರ್ಷ ವಯಸ್ಸಿನ ಹೆಣ್ಣು ಮಕ್ಕಳನ್ನು ಈ ವಿಭಾಗಕ್ಕೆ ಸೇರಿಸಲಾಗುತ್ತದೆ. ಹೀಗೆ ದಾಖಲಾದ ಓರ್ವ ವಿದ್ಯಾರ್ಥಿನಿಗೆ ಎಸ್.ಎಸ್.ಎಲ್.ಸಿ. ತನಕ ವಿದ್ಯಾಭ್ಯಾಸ ನೀಡಲಾಗುವುದು. ಜೊತೆಗೆ ಆಹಾರ, ಆಶ್ರಯ, ಉಡುಪು, ಶಾಲಾ ಪುಸ್ತಕಗಳು, ಇತರ ಶಾಲಾ ಸಲಕರಣೆಗಳು ಮತ್ತು ಔಷಧಿ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಹೀಗೆ ಕರಾವಳಿಯಲ್ಲಿ ಸ್ವಾತಂತ್ರ್ಯಪೂರ್ವದಲ್ಲಿಯೇ ಹೆಣ್ಣುಮಕ್ಕಳಿಗೆ ಆಶ್ರಯ ನೀಡುವ ಕಾರ್ಯವನ್ನು ಪ್ರಗತಿಪರ ಮನೋಧರ್ಮ ಹೊಂದಿದವರಿಂದ ಸಾಧ್ಯವಾಯಿತು.

**ನಿರ್ಗತಿಕರ ಮನೆಗಳು:**

"ಅನಾಥ ಮತ್ತು ನಿರ್ಗತಿಕರ ಸಹಾಯಾರ್ಥ ಮಹಿಳಾ ಮತ್ತು ಶಿಶು ಕಲ್ಯಾಣ ಇಲಾಖೆಯಲ್ಲಿನ ಯೋಜನೆಯಡಿಯಲ್ಲಿ ಮೂರು ಗುಡಿಸಲುಗಳನ್ನು ತೆರೆಯಲಾಗುತ್ತದೆ. ಮೊದಲ ಗುಡಿಸಲು ೧೯೭೫ರಲ್ಲಿ ಮೇ ತಿಂಗಳಿನಲ್ಲಿ ಎರಡನೇ ಗುಡಿಸಲು ೧೯೭೭ರ ಮೇ ತಿಂಗಳಿನಲ್ಲಿ ಮೂರನೇ ಗುಡಿಸಲು ೧೯೨ರ ಏಪ್ರಿಲ್‌ನಲ್ಲಿ ಪ್ರಾರಂಭವಾಗುತ್ತದೆ. ಪ್ರತೀ ಗುಡಿಸಲಿನಲ್ಲಿ ೨೫ ಹುಡುಗಿಯರು ಇರುವ ವ್ಯವಸ್ಥೆಯನ್ನು ಮಾಡಲಾಗಿದೆ"[೮] ಈ ಮೂಲಕ ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ಹೆಣ್ಣಿನ ಹಲವು ಸಮಸ್ಯೆಗಳನ್ನು ಬಗೆಹರಿಸಲು ಕರಾವಳಿಯಲ್ಲಿ ಸತತ ಪ್ರಯತ್ನಗಳು ನಡೆಯುತ್ತಾ ಬಂದಿದೆ.

### ೨.೨.೬. ಭಗಿನಿ ಸಮಾಜ:

"ಎರಡನೇ ಜಾಗತಿಕ ಯುದ್ಧದ ಪರಿಣಾಮವನ್ನು ಇಡೀ ವಿಶ್ವವೇ ಅನುಭವಿಸಿದೆ ಇದರಿಂದ ಭಾರತ ದೇಶದಲ್ಲೂ ಆರ್ಥಿಕ ಸಂಕಷ್ಟ, ಆಹಾರದ ಕೊರತೆ ಅನುಭವಿಸಬೇಕಾಗಿ ಬಂದಿತ್ತು. ಆ ಸಮಯದಲ್ಲಿ ಬಡ ಜನರ ಬದುಕು ದುರ್ಬರವಾಗಿತ್ತು. ಮಕ್ಕಳ ಪೋಷಣೆಯನ್ನು ಮಾಡಲಾಗದ ಸ್ಥಿತಿ ಕುಟುಂಬದಲ್ಲಿತ್ತು. ಮಂಗಳೂರಿನಲ್ಲೂ ಇದೇ ಪರಿಸ್ಥಿತಿ ಇತ್ತು. ಗಂಡಸರು ಹೆಂಗಸರು ದುಡಿಯಲು ಹೋದರೆ ಮನೆಯಲ್ಲಿ ಹಿರಿಯರು ಮತ್ತು ಮಕ್ಕಳು ಇರುತ್ತಿದ್ದರು. ಈ ಮಕ್ಕಳಿಗೆ ಶಾಲೆಗೆ ಹೋಗಲು ಸಾಧ್ಯವಾಗದ ಪರಿಸ್ಥಿತಿ ಮಂಗಳೂರಿನಲ್ಲಿತ್ತು. ಈ ಸಂದರ್ಭದಲ್ಲಿ ಜನಸಾಮಾನ್ಯರೊಡನೆ ಬೆರೆತು ಸುಖದುಃಖದಲ್ಲಿ ಭಾಗಿಯಾದವರು ಕಮಲಾದೇವಿ ಚಟ್ಟೋಪಾಧ್ಯಾಯರು."[೯] ಇವರು ೧೯೩೭ ಆಗಸ್ಟ್ ೩೧ರಂದು ಲೀಲಾ ಏಕಂಬರರಾವ್ ಇನ್ನೂ ಕೆಲವು ಸಮಾನ ಮನಸ್ಕರೊಡಗೂಡಿ Foster Home ಸ್ಥಾಪಿಸುವುದರ ಮೂಲಕ ಮಕ್ಕಳ ಲಾಲನೆ ಪಾಲನೆಯ ಜವಾಬ್ದಾರಿ ವಹಿಸಿಕೊಂಡರು. ನಂತರ ಇದುವೇ ಭಗಿನಿ ಸಮಾಜವಾಗಿ ೧೯೫೪ರಲ್ಲಿ ಸೊಸೈಟಿ ಆ್ಯಕ್ಟ್ ೧೮೬೦ XX೧ರಲ್ಲಿ ನೋಂದಾವಣೆ ಪಡೆಯಿತು. ಭಗಿನಿ ಸಮಾಜ ಎನ್ನುವುದು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿಗಾಗಿ ಜನ್ಮತಾಳಿದ ಸಂಸ್ಥೆಯಾಗಿದೆ. ಇದು ೧೯೫೨ರಲ್ಲಿ ನಿರ್ಗತಿಕ 'ಶಿಶು ನಿಲಯ' ಧಾಮವನ್ನು ಜಪ್ಪುವಿನಲ್ಲಿ ತೆರೆಯಲಾಗಿದ್ದು ಭಗಿನಿ ಸಮಾಜದ ಸಾಧನೆಗಳಲ್ಲಿ ಒಂದು. ಜಿಲ್ಲೆಯ ವಿವಿಧೆಡೆಗಳಲ್ಲಿ ಭಗಿನಿ ಸಮಾಜದ ಉಪಶಾಖೆಗಳನ್ನು ಸ್ಥಾಪಿಸಲಾಗಿದೆ. ಮುಖ್ಯವಾಗಿ ಕಾಪು, ಕಾರ್ಕಳ, ಪುತ್ತೂರು, ಕೋಟೆಕಾರ್, ವಿಟ್ಲ ಮತ್ತು ಕಟಪಾಡಿಗಳಲ್ಲಿ ಇದೆ.

ಜಿಲ್ಲೆಯಲ್ಲಿ ಭಗಿನಿ ಸಮಾಜ ಒಂದು ಕ್ರಿಯಾಶೀಲವಾದ ಸೇವಾ ಸಂಘಟನೆಯಾಗಿದೆ. ಕಳೆದ ೮೦ ವರ್ಷಗಳಿಂದಲೂ ಪರಿಣಾಮವಾಗಿ ಪುರುಷರಷ್ಟೇ ಮಹಿಳೆಯರಿಗೂ ಆರೋಗ್ಯ ಪೂರ್ಣ ಸಮಾಜವನ್ನು ಕಟ್ಟುವ ಸಮಾನ

ಹಕ್ಕಿನ ಮನೋಧರ್ಮವಿದೆಯೆಂಬುದನ್ನು ಸಾಬೀತುಪಡಿಸಿಕೊಂಡು ಬಂದಿದೆ. ಆ ಮೂಲಕ ಭಗಿನಿ ಸಮಾಜವು ತನ್ನ ರಚನಾತ್ಮಕ ಕಾರ್ಯ ಸ್ವರೂಪಗಳ ಮೂಲಕ ವಿವಿಧ ರಂಗಗಳಲ್ಲಿ ಮಾನವ ಕಲ್ಯಾಣಕ್ಕೆ ಗಣನೀಯ ಕೊಡುಗೆಯನ್ನು ನೀಡಿದೆ.

ಭಗಿನಿ ಸಮಾಜದಿಂದ ಹಲವಾರು ಕಾರ್ಯಕ್ರಮಗಳನ್ನು ಸೇವೆಗಳನ್ನು ಸಾರ್ವಜನಿಕ ಹಿತಾಸಕ್ತಿಯ ನೆಲೆಯಲ್ಲಿಯೇ ನಡೆಸಿಕೊಂಡು ಬಂದಿದೆ. "೧೯೫೩ರಲ್ಲಿ ಕುಂದಾಪುರದಲ್ಲಿ ನಡೆದ ಮಹಿಳಾ ಸಮಾವೇಶದಲ್ಲಿ ಆಧುನಿಕ ಕಾಲದ ಮಹಿಳೆಯರು ಮತ್ತು ಕುಟುಂಬ ಯೋಜನೆಯಂತಹ ಕಾರ್ಯ ಯೋಜನೆಗಳ ಬೆಳವಣಿಗೆ, ಹೊಸ ಶಿಕ್ಷಣ ನೀತಿ, ಕರ್ನಾಟಕ ರಾಜ್ಯ ಸಂರಚನೆ ಹೀಗೆ ಮೊದಲಾದ ವಿಚಾರಗಳು ಚರ್ಚೆಗೆ ಒಳಗಾಯಿತು. ಸಮಾವೇಶದ ಉದ್ಘಾಟಕರಾಗಿ ಭಗಿನಿ ಸಮಾಜದ ಸಕ್ರಿಯ ಸದಸ್ಯೆಯಾದ ಕುಂದಾಪುರದ ಉಮಾಬಾಯಿಯವರು ಅಧ್ಯಕ್ಷೆಯಾಗಿದ್ದರು. ಈ ಸಮಾವೇಶದಿಂದ ಭಗಿನಿ ಸಮಾಜವು ಪ್ರೇರೇಪಿತವಾಗಿ ಮಂಗಳೂರಿನ ಎಸ್.ಆರ್.ಎಸ್. ಹೋಂ. ಕೇಂದ್ರದಲ್ಲಿ ಅಖಿಲ ಭಾರತ ೨೫ನೇಯ ಮಹಿಳಾ ಸಮ್ಮೇಳನ ಆಯೋಜಿಸುವ ಜವಾಬ್ದಾರಿಯನ್ನು ವಹಿಸಿಕೊಂಡಿತು."[೧೦] ಈ ಸಂದರ್ಭ ಭಗಿನಿ ಸಮಾಜದ ಸದಸ್ಯೆಯರಿಗೆ ಹೊಸ ಹುರುಪನ್ನು ತಂದುಕೊಟ್ಟಿತು ಮತ್ತು ಮೇಲ್ಮಟ್ಟದ ಖ್ಯಾತ ಮಹಿಳೆಯರ ಸಂಪರ್ಕ ದೊರೆಯುವ ಅಪೂರ್ವ ಅವಕಾಶ ಲಭಿಸಿತು. ಅಖಿಲ ಭಾರತ ಮಹಿಳಾ ಸಮ್ಮೇಳನದ ಅಧ್ಯಕ್ಷೆ ಲಕ್ಷ್ಮೀ. ಎನ್. ಮೆನನ್‌ರವರ ಮಾರ್ಗದರ್ಶನದಿಂದಾಗಿ ೧೯೬೯ರಲ್ಲಿಯೂ ಅಖಿಲ ಭಾರತ ೩೮ನೇ ವಾರ್ಷಿಕ ಸಮಾವೇಶವನ್ನು ಸಂಘಟಿಸಿದರು. ಈ ಸಮ್ಮೇಳನಕ್ಕೆ ಪಶ್ಚಿಮ ಜರ್ಮನಿ, ಯು.ಎಸ್.ಎಸ್.ಆರ್., ಶ್ರೀಲಂಕಾ, ಯುಗೋಸ್ಲೋವಿಯಾ ಮೊದಲಾದ ಕಡೆಗಳಿಂದ ಪ್ರತಿನಿಧಿಗಳು ಹಾಗೆಯೇ ಮಹಿಳಾ ರಾಷ್ಟ್ರೀಯ ಕೌನ್ಸಿಲ್, ಗ್ರಾಮೀಣ ಮಹಿಳಾ ಸಂಘ, ನೈತಿಕ ಮತ್ತು ಸಾಮಾಜಿಕ ಸಂಘಟನೆಗಳ ಪ್ರತಿನಿಧಿಗಳು ಆಗಮಿಸಿ ಸಮ್ಮೇಳನದಲ್ಲಿ ಭಾಗವಹಿಸಿದರು ಎಂದು ದಾಖಲೆಗಳು ತಿಳಿಸುತ್ತವೆ.

ಭಗಿನಿ ಸಮಾಜವು ಮಹಿಳಾ ಮತ್ತು ಮಕ್ಕಳಿಗೆ ಅನುಕೂಲವಾಗುವ ಕಾರ್ಯಕ್ರಮಗಳನ್ನೇ ಹಮ್ಮಿಕೊಂಡು ಬಂದಿದೆ. ಮುಖ್ಯವಾಗಿ ಆರೋಗ್ಯ, ಸಾಮಾಜಿಕ ಪಿಡುಗುಗಳಾದ ಮಾನವ ಕಳ್ಳಸಾಗಣೆ, ಬಾಲಕಾರ್ಮಿಕರು, ಯುವ ಪೀಳಿಗೆಯಲ್ಲಿನ ದುರಭ್ಯಾಸ, ವಾಯುಮಾಲಿನ್ಯ, ಆರ್ಥಿಕವಾಗಿ ಹಿಂದುಳಿದವರಿಗೆ ಮನೆಯಲ್ಲಿ ತಯಾರಿಸುವ ಮತ್ತು ಮಾರಾಟ ಮಾಡುವ ಆಹಾರೋತ್ಪನ್ನಗಳ ಕಾರ್ಯಗಾರಗಳನ್ನು, ಆರ್ಥಿಕವಾಗಿ ಹಿಂದುಳಿದ ಮತ್ತು ಕಲಿಕೆಯಲ್ಲಿ ಮುಂದಿರುವ ಹತ್ತು ಮಂದಿ ವಿದ್ಯಾರ್ಥಿನಿಯರಿಗೆ ಮತ್ತು ಪದವಿ ಶಿಕ್ಷಣಕ್ಕಾಗಿ ಆರ್ಥಿಕ ನೆರವು ನೀಡುವುದು. ಅನೇಕ ಶಾಲೆಗಳಿಗೆ ಭೇಟಿ ನೀಡಿ ಹದಿಹರೆಯದ ಸಮಸ್ಯೆಗಳಿಗೆ ಸ್ಪಂದಿಸುವ ಕಾರ್ಯಕ್ರಮಗಳನ್ನು ನಡೆಸುತ್ತಾ ಸಂಘ ಬಂದಿದೆ. ಹೀಗೆ ಭಗಿನಿ ಸಮಾಜವು ಮಹಿಳೆಯರ ಮತ್ತು ಮಕ್ಕಳ ಪ್ರಗತಿಗಾಗಿ ಹಲವು ಕಾರ್ಯಗಳನ್ನು ನಡೆಸಿಕೊಂಡು ಬಂದಿದೆ.

### ೨.೨.೭. ರಾಮಕೃಷ್ಣ ಮಿಷನ್:

ಸೇವೆಯೇ ಪರಮ ಆದರ್ಶವೆಂದು ನಂಬಿ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಚಟುವಟಿಕೆ ಮೂಲಕವೇ ಸಮಾಜದ ಅಭ್ಯುದಯಕ್ಕೆ ಶ್ರಮಿಸುವ ಸಂಸ್ಥೆ ರಾಮಕೃಷ್ಣ ಮಿಷನ್ ಇದು ಮಂಗಳೂರಿನಲ್ಲಿ ಜೂನ್ ಮೂರು ೧೯೪೭ರಲ್ಲಿ ಸ್ಥಾಪನೆಗೊಂಡಿತು. ಸಾಹುಕಾರ ವೆಂಕಟೇಶ್ ಪೈ ರವರಿಂದ ಸ್ಥಾಪನೆಗೊಂಡ ಬಾಲಕಾಶ್ರಮವನ್ನು ರಾಮಕೃಷ್ಣ ಮಿಷನ್ ನಡೆಸತೊಡಗಿತು. ಮಕ್ಕಳಲ್ಲಿ ಬಾಲ್ಯದಲ್ಲಿಯೇ ನೈತಿಕ ಮತ್ತು ಆಧ್ಯಾತ್ಮಿಕ ಭಾವನೆ ತುಂಬುವ ಕೆಲಸವನ್ನು ಜೊತೆಗೆ ರಾಮಕೃಷ್ಣ, ವಿವೇಕಾನಂದರ ವೇದಾಂತ ಸಾಹಿತ್ಯಗಳು ಹೆಚ್ಚು ಜನರಿಗೆ ತಲುಪಬೇಕೆಂಬ ಉದ್ದೇಶದಿಂದ ಗ್ರಂಥಾಲಯವನ್ನು ಪ್ರಾರಂಭಿಸಿದರು. ಇದಲ್ಲದೆ ಸಾರ್ವಜನಿಕರಿಗೆ ಹಾಗೂ ವಿದ್ಯಾರ್ಥಿ ಸಮುದಾಯಕ್ಕೆ ಅಗತ್ಯವಿರುವ ಆಧ್ಯಾತ್ಮಿಕ ಶಿಬಿರಗಳು ವ್ಯಕ್ತಿತ್ವ

ನಿರ್ಮಾಣ ಶಿಬಿರ, ಬೇಸಿಗೆ ಶಿಬಿರ, ಧಾರ್ಮಿಕ ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು ವಿದ್ಯಾರ್ಥಿ-ಅಧ್ಯಾಪಕರಿಗಾಗಿ ಕಮ್ಮಟಗಳು. ನಡೆಸಿಕೊಂಡು ಬಂದಿದೆ. ಇದಲ್ಲದೆ ಮಹಿಳೆಯರೆಲ್ಲ ಒಟ್ಟಾಗಿ 'ಶಾರದಾ ಮಹಿಳಾ ವೃಂದ'ವನ್ನು ಆರಂಭಿಸುವ ಮೂಲಕ ರಾಮಕೃಷ್ಣ ಮಿಷನ್ ಮಹಿಳೆಯರಲ್ಲಿಯೂ ಸಂಘಟನಾ ಮನೋಭಾವ, ಚಿಂತನಪರ ಯೋಜನೆಗಳು, ಹಾಸ್ಯಮಿಶ್ರಿತ ಪ್ರತಿಭಾವಂತ ಮಾತುಗಾರಿಕೆ, ಉತ್ಸಾಹಶೀಲ ಮನೋವೃತ್ತಿಯನ್ನು ಬೆಳೆಸುವುದರಲ್ಲಿ ಪ್ರಮುಖ ಪಾತ್ರವಹಿಸಿದೆ.

### ೨.೨.೮. ಕನ್ನಡ ಸಂಘ ಮಂಗಳೂರು:

ಮಣಿಪಾಲದಲ್ಲಿ ೧೯೬೦ರಲ್ಲಿ ಅ.ನ.ಕೃ.ರವರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ ನಡೆಯಿತು. ಸಮ್ಮೇಳನಕ್ಕೆ ಮಂಗಳೂರಿನ ಸರಕಾರಿ ಕಾಲೇಜಿನ ವಿದ್ಯಾರ್ಥಿಗಳೂ ಅ. ಬಾಲಕೃಷ್ಣ ಶೆಟ್ಟಿ ಪೊಳಲಿ, ಎ.ಎಸ್.ಎನ್. ಹೆಬ್ಬಾರ್, ಸಂತೋಷ ಕುಮಾರ್ ಗುಲ್ವಾಡಿ, ಎಂ.ಎಸ್. ಕೃಷ್ಣ ಭಟ್ಟ ಇವರುಗಳು ಭಾಗವಹಿಸಿದರು. ಈ ಸಮ್ಮೇಳನದಿಂದ ಪ್ರೇರಿತರಾಗಿ ಮಂಗಳೂರಿನಲ್ಲೂ ಸಾಹಿತ್ಯ ಚಟುವಟಿಕೆಗಳಿಗೆ ಒಂದು ಸಂಘ ಅಗತ್ಯವಿದೆಯೆಂಬುದನ್ನು ಮನಗಂಡು ಸಂತ ಅಲೋಶಿಯಸ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ತೆಕ್ಕುಂಜ ಗೋಪಾಲಕೃಷ್ಣ ಭಟ್ಟರಲ್ಲಿ ತೋಡಿಕೊಂಡ ಫಲವಾಗಿ ತೆಕ್ಕುಂಜೆ ಗೋಪಾಲಕೃಷ್ಣರ ಮಾರ್ಗದರ್ಶನದಲ್ಲಿ ಕನ್ನಡ ಸಂಘ ಉದಯವಾಯಿತು. ಇದರ ಸ್ಥಾಪಕಾಧ್ಯಕ್ಷರಾಗಿ ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ, ಕಾರ್ಯದರ್ಶಿಯಾಗಿ ಅ. ಬಾಲಕೃಷ್ಣ ಶೆಟ್ಟಿ ಪೊಳಲಿ, ಕೋಶಾಧಿಕಾರಿಗಳಾಗಿ ಎ.ಎಸ್.ಎನ್. ಹೆಬ್ಬಾರ್ ಮತ್ತು ಸಂತೋಷ ಕುಮಾರ್ ಗುಲ್ವಾಡಿಯವರು ಸ್ಥಾಪಕ ಕಾರ್ಯಕಾರಿ ಸಮಿತಿಯಲ್ಲಿದ್ದರು.

**ಸ್ಥಾಪಕ ಸದಸ್ಯರು :**

ಮಂದಾರ ಕೇಶವ ಭಟ್ಟ ವಿದ್ವಾನ್, ಕೊಂಡಾಣ ವಾಮನ ವಿದ್ವಾನ್, ಪಿ.ಕೆ. ನಾರಾಯಣ ವಿದ್ವಾನ್, ಕೆ. ಬ್ರಹ್ಮಾನಂದ, ಕೀತಾನ ರಾಮಚಂದ್ರ, ಬಿ.ಎಂ. ಇದಿನಬ್ಬ, ಕೈಯಾರ ಕಿಞ್ಞಣ್ಣ ರೈ, ಕೋ.ಅ. ಉಡುಪ, ಆನಂದಿ ಸದಾಶಿವರಾವ್, ಕೆ.ಎನ್. ಭಟ್. ಶಿರಾಡಿಪಾಲ್, ಎಂ. ರಾಮಚಂದ್ರ ಕಾರ್ಕಳ. ಎಂ. ವೀರಪ್ಪ ಮೊಯಿಲಿ. ಇವರಲ್ಲದೆ ಕಾರ್ಯಕಾರಿ ಸಮಿತಿಯಲ್ಲಿ ಅಮ್ಮೆಂಬಳ ಶಂಕರನಾರಾಯಣ ನಾವಡ, ಅಮ್ಮೆಂಬಳ ಅನಂತಯ್ಯ ನಾವಡ, ಜೇಂಕಳ ಶ್ರೀನಿವಾಸ ಭಟ್ಟ. ಡಾ। ಸೀ.ಹೊಸಬೆಟ್ಟು, ಕಂದೂರು ಪರಮೇಶ್ವರ ಐತಾಳರು, ಡಾ। ಸಂಜೀವ ಪೋಳಾರ, ಎನ್.ಜಿ. ರಾಮಕೃಷ್ಣ ಭಟ್, ಗೋವರ್ಧನ ಹೊಸಮನಿ, ಎಸ್.ಆರ್. ಹೆಗ್ಡೆ, ವೆಂಕಟ ರಾಯಚಾರ್ಯ ಸುರತ್ಕಲ್. ಜೆ.ಪಿ. ಸುವರ್ಣ, ಡಿ.ಪಿ. ಶೆಟ್ಟಿಯಾನ್, ಎಲ್. ಆರ್. ಬೊಳ್ಳಾರ್ಕರ್, ಮುಳಿಯ ಕೇಶವಯ್ಯ, ಪಿ.ಬಿ. ಹೊಸಮನೆ, ಕೆ.ಎಸ್. ಪದ್ಮನಾಭಾಚಾರ್ಯ, ಟಿ.ಉಷಾ. ಕಾ.ವಾ. ಆಚಾರ್ಯ ಶಿರ್ವ, ಕೆ.ಪಿ. ಜಗನ್ನಾಥ ರಾವ್. ಮಂದಾರ ಕೇಶವ ಭಟ್, ಗುಲ್ವಾಡಿ ಗೋಪಿನಾಥ ಭಟ್. ಜಗನ್ನಾಥ ಆಳ್ವ, ಬಿ.ವಿ. ಐತಾಳ. ಫಾದರ್ ಅಂತೋನಿ ಜೋನ್ ಡಿ' ಸೋಜ, ಫಾದರ್ ಎಚ್. ಜೆ. ನೊರೊನ್ಹಾ. ಜೆ.ಎಸ್. ಎಂ. ವಾಸುದೇವ ರಾವ್, ಶ್ರೀನಿವಾಸ ಮೂರ್ತಿ. ಎಸ್.ವಿ. ಪರಮೇಶ್ವರ ಭಟ್ಟ, ಎಂ.ಎಚ್. ಕೊಳ್ನಾಡ್, ಕೃಷ್ಣ ಗೋಪಾಲ, ಬಿ.ಪಿ. ಬಾಳಿಗಾ. ಅಳಿಕೆ. ಮೋನಪ್ಪ ರೈ ಮಾರಪ್ಪ ಶೆಟ್ಟಿ ಕಾರ್ಕಳ, ಎಂ. ಜನಾರ್ಧನ. ಕೆ.ಎಸ್. ಉಪಾಧ್ಯಾಯ ಹೀಗೆ ಮೊದಲಾದವರು ಬೇರೆ ಬೇರೆ ವರ್ಷಗಳಲ್ಲಿ ಕಾರ್ಯಕಾರಿ ಸಮಿತಿಯಲ್ಲಿದ್ದರು.

ತೆಕ್ಕುಂಜೆಯವರು ಸುಮಾರು ೧೨ ವರ್ಷ ಸ್ಥಾಪಕ ಅಧ್ಯಕ್ಷರಾಗಿದ್ದರು. ಇವರ ನಿಧನದ ಬಳಿಕ ಗೋಪಾಲಕೃಷ್ಣ ಭಟ್ಟರ ಇವರ ಬಳಿಕ ಸ್ವಲ್ಪ ಸಮಯ ಅ. ಬಾಲಕೃಷ್ಣ ಶೆಟ್ಟರೇ ಅಧ್ಯಕ್ಷಸ್ಥಾನ ನಿರ್ವಹಿಸಿದರು. ಮುಂದೆ ಕಾರ್ಯದರ್ಶಿಗಳಾಗಿ ಕೀತಾನ ರಾಮಚಂದ್ರ, ಪ್ರಭಾಕರ ಜೋಶಿ, ನಾ. ದಾ. ಶೆಟ್ಟಿ, ಇವರ ಬಳಿಕ ೧೨ ವರ್ಷಗಳ ಕಾಲ ಸಂಘದ ಬೆಳ್ಳಿ ಹಬ್ಬದವರೆಗೆ

ಚಂದ್ರಕಲಾ ನಂದಾವರ ಕಾರ್ಯದರ್ಶಿಯಾಗಿದ್ದರು. ಜೊತೆಯಲ್ಲಿ ಕೋಶಾಧಿಕಾರಿಗಳಾಗಿ ಯು. ನಾರಾಯಣ ಶರ್ಮಾ, ವಾಸುದೇವ ಬೋಳೂರು, ಜತೆ ಕಾರ್ಯದರ್ಶಿಯಾಗಿ ಅಡ್ಡೂರು ಕೃಷ್ಣರಾವ್ ಕಾರ್ಯನಿರ್ವಹಿಸಿದರು. ಚಂದ್ರಕಲಾ ನಂದಾವರರ ಬಳಿಕ ಭಾಸ್ಕರ ರೈ ಕುಕ್ಕುವಳ್ಳಿ ಕಾರ್ಯದರ್ಶಿಯಾದರು. ಅ. ಬಾಲಕೃಷ್ಣ ಶೆಟ್ಟಿಯವರು ವೃತ್ತಿ ನಿರತರಾಗಿ ಬೇರೆ ಬೇರೆ ಊರುಗಳಿಗೆ ವರ್ಗಾವಣೆ ಹೊಂದುತ್ತಿದ್ದುದರಿಂದ ಮುಳಿಯ ಮಹಾಬಲ ಭಟ್ಟರು ಅಧ್ಯಕ್ಷರಾದರು. ಇವರ ಬಳಿಕ ಕುಲ್ಯಾಡಿ ಮಾಧವ ಪೈಗಳು ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಾರೆ.

ಕನ್ನಡ ಸಂಘದಲ್ಲಿ ಪ್ರತೀ ತಿಂಗಳಿಗೊಂದು ಉಪನ್ಯಾಸನಾ ಕಾರ್ಯಕ್ರಮಗಳು ನಡೆಯುತ್ತಿತ್ತು. ಇವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದ್ದರೂ ಈ ಕಾರ್ಯಕ್ರಮಗಳಿಗೆ ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ವಿದ್ಯಾರ್ಥಿಗಳು ತಪ್ಪದೆ ಹಾಜರಾಗುತ್ತಿದ್ದರು. ದಕ್ಷಿಣ ಕನ್ನಡದ ಜನರಿಗೆ ಗೋಕಾಕ್ ವರದಿಯ ಬಗ್ಗೆ ಅರಿವು ಮೂಡಿಸುವ ಸಲುವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿತ್ತು. ಆ ಸಂಘದಿಂದ ಬೆಳ್ಳಿಹಬ್ಬದ ಪ್ರಯುಕ್ತ ೧೯೮೬ ಆಗಸ್ಟ್ ೬ರಂದು ದಕ್ಷಿಣ ಕನ್ನಡ ಜಿಲ್ಲೆಯ ಮೊತ್ತ ಮೊದಲ ಮಹಿಳಾ ಸಾಹಿತ್ಯ ಸಮ್ಮೇಳನವನ್ನು ಸಂಘದ ವತಿಯಿಂದ ಹಮ್ಮಿಕೊಳ್ಳಲಾಯಿತು.

ಈ ಮಹಿಳಾ ಸಂಘಕ್ಕೆ ಬೆಂಗಳೂರು ಕರ್ನಾಟಕ ಲೇಖಕಿಯರ ಸಂಘದ ಪದಾಧಿಕಾರಿಗಳಾದ ಎಚ್.ಎಸ್.ಪಾರ್ವತಿ, ನಾಗಮಣಿ ಎಸ್. ರಾವ್, ಶಾಂತಾ ನಾಗರಾಜ್ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ. ನಾರಾಯಣರು ಭಾಗವಹಿಸಿರುತ್ತಾರೆ. ಆ ಸಮ್ಮೇಳನದಲ್ಲಿ ಜಿಲ್ಲೆಯ ಹಿರಿಯ ಲೇಖಕಿಯರಾಗಿದ್ದ ಆನಂದಿ ಸದಾಶಿವರಾವ್, ಪದ್ಮಾ ಶೆಣೈ, ಕಾಸರಗೋಡಿನ ಡಾ। ಲಲಿತಾ ಎಸ್. ಎನ್. ಭಟ್, ಪುತ್ತೂರಿನ ಎ. ಪಿ. ಮಾಲತಿ, ಗಂಗಾ ಪಾದೇಕಲ್, ಉಡುಪಿಯ ವೈದೇಹಿ ಮೊದಲಾದವರು ಪಾಲುಗೊಂಡಿದ್ದು ಒಟ್ಟು ೫೦ಕ್ಕೂ ಮಿಕ್ಕಿ ಮಹಿಳೆಯರು ವಿವಿಧ ಗೋಷ್ಠಿಗಳಲ್ಲಿ ಪಾಲುಗೊಂಡದ್ದಲ್ಲದೆ ಸುಮಾರು ೩೦೦ಕ್ಕೂ ಹೆಚ್ಚು ಹಿರಿಯ ಕಿರಿಯ ಲೇಖಕಿಯರು ಸಭೆಯಲ್ಲಿ ಪಾಲುಗೊಂಡರು ಎಂದು ದಾಖಲೆಗಳು ತಿಳಿಸುತ್ತವೆ.

ಆ ಸಮ್ಮೇಳನವು ಮಹಿಳೆಯರು ಸಾಹಿತಿಕವಾಗಿ ಒಗ್ಗೂಡಲು ಮತ್ತು ಮಹಿಳೆಯರದ್ದೆ ಸಾಹಿತ್ಯ ಸಂಘಟನೆಯೊಂದು ಜನ್ಮತಾಳಲು ಪೂರಕ ಕಾರಣವಾಯಿತು. “ಮಂಗಳೂರಿನ ಕನ್ನಡ ಸಂಘದ ಕಾರ್ಯಕ್ರಮಗಳಿಗೆ ಹಿರಿಯ ಸಾಹಿತಿಗಳು ಮತ್ತು ಗಣ್ಯರು ಭೇಟಿ ನೀಡಿದ್ದಾರೆ. ಮುಖ್ಯವಾಗಿ ರಾಷ್ಟ್ರಕವಿ ಗೋವಿಂದ ಪೈ, ನಿಟ್ಟೂರು ಶ್ರೀನಿವಾಸರಾಯರು, ಜಯಚಾಮರಾಜೇಂದ್ರ ಒಡೆಯರು, ಮುಖ್ಯಮಂತ್ರಿ ನಿಜಲಿಂಗಪ್ಪ, ವಿ. ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಿದ್ಧವನಹಳ್ಳಿ ಕೃಷ್ಣ ಶರ್ಮ ಮೊದಲಾದವರು ಪಾಲ್ಗೊಂಡಿದ್ದಾರೆ. ಇದರಿಂದ ಮಂಗಳೂರಿನ ಸಾಹಿತ್ಯಾಸಕ್ತರಿಗೆ ತಮ್ಮನ್ನು ಸಾಹಿತ್ಯದಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆಯಾಗಿದೆ. ೩೦ ವರ್ಷಗಳ ಅವಧಿಯಲ್ಲಿ ಈ ಸಂಘದ ಕಾರ್ಯಕ್ರಮಗಳಲ್ಲಿ ರಾಜ್ಯದ ಅನೇಕ ಹಿರಿಯ ಸಾಹಿತಿಗಳು, ರಾಜ್ಯಪಾಲರು, ಮುಖ್ಯಮಂತ್ರಿಗಳು ಪಾಲ್ಗೊಂಡಿದ್ದಾರೆ. ಮಂಗಳೂರಿನ ಹಲವಾರು ಸಾಧಕರಿಗೆ ಅದರಲ್ಲೂ ಕಯ್ಯಾರ ಕಿಞ್ಞಣ್ಣ ರೈಗಳಂತಹ ಸಾಹಿತಿಗಳಿಗೆ, ಮುವ್ವಾರು ಕಿಟ್ಟಣ್ಣ ಭಾಗವತರಂತಹ ಯಕ್ಷಗಾನ ಕಲಾವಿದರಿಗೆ, ಪತ್ರಕರ್ತರಿಗೆ ಕನ್ನಡ ಸಂಘ ಸನ್ಮಾನಗಳನ್ನು ಮಾಡುತ್ತಾ ಬಂದಿದೆ. ಇದರಿಂದ ಮಂಗಳೂರಿನ ವಿವಿಧ ಕ್ಷೇತ್ರದ ಸಾಧಕರಿಗೆ ಪ್ರೋತ್ಸಾಹವನ್ನು ನೀಡುವ ಕಾರ್ಯಗಳನ್ನು ಮಾಡುವ ಮೂಲಕ ವಿಭಿನ್ನ ಪ್ರತಿಭೆಗಳನ್ನು ಬೆಳೆಸುತ್ತಾ ಬಂದಿದೆ. ಕನ್ನಡ ಸಂಘವು ಕನ್ನಡ ರತ್ನ, ಕನ್ನಡ ಜಾಣ ಪರೀಕ್ಷೆಗಳನ್ನು ನಡೆಸುತ್ತಿದ್ದೆ. ಆ ಮೂಲಕ ಕನ್ನಡವನ್ನು ಬೆಳೆಸುವ ಉಳಿಸುವ ಕಾರ್ಯದಲ್ಲೂ ಸಾಹಿತ್ಯ ಸಂಘ ಶ್ರಮಿಸುತ್ತಿದೆ.”.[೧೧]

## ೨.೩. ಕರಾವಳಿಯ ಶಿಕ್ಷಣ ಸಂಸ್ಥೆಗಳ ಪ್ರಭಾವ :

### ೨.೩.೧. ಬಿ.ಇ.ಎಂ. ಶಿಕ್ಷಣ ಸಂಸ್ಥೆ:

ಮಿಷನರಿಗಳು ಭಾರತಕ್ಕೆ ಭೇಟಿ ನೀಡಿದ ಹಿನ್ನಲೆ: "೧೯ನೇ ಶತಮಾನದ ಆರಂಭದಲ್ಲಿ ಭಾರತಕ್ಕೆ ಜರ್ಮನಿ ಮತ್ತು ಸ್ವಿರ್ಜರ್‌ಲ್ಯಾಂಡ್‌ನಿಂದ ಪ್ರೊಟೆಸ್ಟೆಂಟ್ ಕ್ರಿಶ್ಚಿಯನ್ ಮಿಷನರಿಗಳು ಬಂದವು. ಈ ಮಿಷನರಿಗಳು ಇವೆಂಜಲಿಕಲ್ ಮಿಷನ್ ಸೊಸೈಟಿಯಿಂದ ನಿಯೋಜಿತಗೊಂಡವರು. ಇವ್ಯಾಂಜಲಿಕಲ್ ಮಿಷನ್‌ನ ಕೇಂದ್ರ ಕಛೇರಿ ಸ್ವಿಟ್ಜರ್‌ಲ್ಯಾಂಡ್‌ನ ಬಾಸೆಲ್‌ನಲ್ಲಿದೆ. ಈ ಬಾಸೆಲ್‌ಮಿಷನ್ ವಿಶ್ವದಾದ್ಯಂತ ಅನೇಕ ರಾಷ್ಟ್ರಗಳಿಗೆ ತಮ್ಮ ಮಿಷನರಿಗಳನ್ನು ಕಳುಹಿಸಿದೆ. ಆದರೆ ಭಾರತಕ್ಕೆ ನಿಯೋಜನೆಗೊಂಡ ಮಿಷನರಿಗಳಲ್ಲಿ ಅನೇಕರು ಜರ್ಮನರು. ಬೆರಳೆಣಿಕೆಯಷ್ಟು ಮಿಷನರಿಗಳು ಸ್ವಿರ್ಜಲ್ಯಾಂಡ್‌ನವರು. ಈ ದೇಶವನ್ನು ಪ್ರವೇಶಿಸಿದ ಅವರಿಗೆ ನಮ್ಮ ದೇಶದ ಪರಿಸ್ಥಿತಿ ಅರಿವಾದಾಗ ಇಲ್ಲಿನ ಜನರ ಆರ್ಥಿಕ ಸಾಮಾಜಿಕ ಹಾಗೂ ಶೈಕ್ಷಣಿಕ ಅವಶ್ಯಕತೆಯನ್ನು ಅವರು ಮನಗಂಡರು."[1] ಜರ್ಮನ್ ಮಿಷನರಿಗಳು ೧೮೩೪ರಲ್ಲಿ ಮಂಗಳೂರಿಗೆ ಬಂದು ಇಲ್ಲಿನ ಜನರ ಕೆಲಸಗಳು, ಭಾಷೆ ಮತ್ತು ಸಂಸ್ಕೃತಿಯನ್ನು ಮೊದಲು ಅರಿತುಕೊಂಡರು ಜೊತೆಗೆ ಮೇಲ್ವರ್ಗದ ದಬ್ಬಾಳಿಕೆಗೆ ಒಳಗಾದ ಜನರನ್ನು ಉದ್ಧಾರ ಮಾಡುವ ಬಗೆಯೂ ಚಿಂತಿಸಿದರು. ಮಂಗಳೂರಿನ ಜನತೆ ಜಮೀನ್ದಾರರ ಅಡಿಯಾಳಾಗಿ ಕೆಲಸಗಾರರಾಗಿ ದುಡಿಬೇಕಾಗಿತ್ತು. ಮಂಗಳೂರಿನಲ್ಲಿ ಅರೆ ನಿರುದ್ಯೋಗಿಗಳು ಇದ್ದರಿಂದಾಗಿ ಸಾಮಾನ್ಯ ಜನರು ಬಡತನದಲ್ಲಿಯೇ ತಮ್ಮ ಜೀವನವನ್ನು ಕಳೆಯಬೇಕಾಗಿತ್ತು. ಜನರಿಗೆ ಆರೋಗ್ಯದ ಸಮಸ್ಯೆ, ಜೊತೆಗೆ ವಿದ್ಯಾಭ್ಯಾಸ ಇಲ್ಲದರಿಂದ ಕೀಳರಿಮೆಯ ಭಾವ ಮಂಗಳೂರಿನ ಜನತೆಗಿತ್ತು. ಅಂದಿನ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರಿಗೆ ತಮ್ಮ ವಿಚಾರಗಳನ್ನು ಮಂಡಿಸಲು ಅವಕಾಶಗಳು ಇರಲಿಲ್ಲ ಮತ್ತು ಮಹಿಳೆಯರಿಗೆ ಸಂಬಂಧಿಸಿದ ನಿರ್ಧಾರಗಳನ್ನು ಪುರುಷರೇ ತೆಗೆದುಕೊಳ್ಳುತ್ತಿದ್ದರು ಹೀಗೆ ಪುರುಷರ ದಬ್ಬಾಳಿಕೆಗೆ ಮಹಿಳೆಯರು ಒಳಗಾಗುತ್ತಿದ್ದರು.

ಹೀಗೆ ಸಾಮಾನ್ಯ ಜನರ ಜೀವನ ಮಟ್ಟವನ್ನು ಸುಧಾರಿಸುವ ಸಲುವಾಗಿಯೇ ಹಲವು ಸಂಸ್ಥೆಗಳನ್ನು ಮಿಷನರಿಗಳು ಸ್ಥಾಪಿಸಿದವು. ಅವುಗಳಲ್ಲಿ ಶಿಕ್ಷಣ ಸಂಸ್ಥೆಗಳು ಒಂದು. ೨೦೦ ವರ್ಷಗಳ ಹಿಂದೆ ಶಿಕ್ಷಣ ಕೇವಲ ಅದೃಷ್ಟವಂತರಿಗೆ ಮತ್ತು ಸಮಾಜದ ಒಂದು ವರ್ಗದವರಿಗೆ ಮಾತ್ರ ಗುರುಕುಲ ಪದ್ಧತಿಯ ಮೂಲಕ ಶಿಕ್ಷಣ ದೊರಕುತ್ತಿತ್ತು. ಜನರಲ್ಲಿ ಆಧುನಿಕ ಮನೋಭಾವ ಬೆಳೆಯಬೇಕಾದರೆ ಆಧುನಿಕ ಶಿಕ್ಷಣವನ್ನು ಕೊಡಬೇಕು ಎಂಬುವುದನ್ನು ಮಿಷನರಿಗಳು ಮಂಗಳೂರಿಗೆ ಬಂದ ನಾಲ್ಕು ವರ್ಷದಲ್ಲಿಯೇ ಅರಿತುಕೊಂಡರು. ಆದಕ್ಕಾಗಿಯೇ ೧೮೩೮ರಲ್ಲಿ ಮಂಗಳೂರಿನ ಮಿಷನ್ ಸ್ಟ್ರೀಟ್‌ನಲ್ಲಿ ಈಗಿನ ಬಂದರು ಪ್ರದೇಶದಲ್ಲಿ ಚಿಕ್ಕ ರೀತಿಯಲ್ಲಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಇಲ್ಲಿ ಆಂಗ್ಲ ಮಾಧ್ಯಮ ಶಿಕ್ಷಣವನ್ನು ಬೋಧಿಸಲಾಗುತ್ತಿತ್ತು. ಇದು ಉನ್ನತ ಮಟ್ಟದ ಶಿಕ್ಷಣವೆಂದು ಪರಿಗಣಿಸಿ ಮಂಗಳೂರಿನ ಎಲ್ಲಾ ವರ್ಗದವರಿಗೂ ಶಿಕ್ಷಣ ಲಭ್ಯವಾಗಬೇಕೆಂಬ ದೃಷ್ಟಿಯಲ್ಲಿ ರೆವೆ। ಹರ್ಮನ್ ಮೊಗ್ಲಿಂಗ್‌ರವರ ನಾಯಕತ್ವದಲ್ಲಿ ಮಂಗಳೂರಿನ ಹೃದಯ ಭಾಗವಾದ ಕಾರ್‌ಸ್ಟ್ರೀಟ್‌ನ ಪರಿಸರದಲ್ಲಿ ದೊಡ್ಡ ನಿವೇಶನವನ್ನು ಖರೀದಿಸಿ ೧೮೭೮ರಲ್ಲಿ ಇಂಗ್ಲೀಷ್ ಮಾಧ್ಯಮ ಶಾಲೆಯನ್ನು ತೆರೆಯಲಾಯಿತು. ೧೮೮೮ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿ ಸರಕಾರ ಮಿಷನ್ ಶಾಲೆಯನ್ನು ಪ್ರೌಢಶಾಲೆಯಾಗಿ ಎಸ್.ಎಸ್. ಎಲ್.ಸಿ.ಯವರೆಗೆ ಮಾನ್ಯತೆ ನೀಡಿತು. ಇದನ್ನು ಬಾಸೆಲ್ ಇವಾಂಜಲಿಕಲ್ ಮಿಷನ್ ಹೈಸ್ಕೂಲ್ (ಬಿ.ಇ.ಎಂ. ಹೈಸ್ಕೂಲ್) ಎಂದು ಕರೆಯಲಾಯಿತು. ಬಾಸೆಲ್ ಮಿಷನ್ ಸ್ಥಾಪಿಸಿದ ಮೊದಲ ಶಾಲೆಯಾಗಿದೆ.

ಕೆಲವೇ ವರ್ಷಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಸುಮಾರು ೨೦೦೦ಕ್ಕೂ ಅಧಿಕವಾಯಿತು ಎಂಬುದನ್ನು ಶಾಲೆಯ ಚರಿತ್ರೆಯಿಂದ ತಿಳಿದುಕೊಳ್ಳಬಹುದಾಗಿದೆ. ಅಂದಿನಿಂದಲೇ ಇದು ಜಿಲ್ಲೆಯ ಮೊದಲ ಶಾಲೆಯಾಗಿದೆ. ಈ ಶಾಲೆಯಲ್ಲಿ

ಸ್ಥಳೀಯ ಭಾಷೆಯಾದ ಕನ್ನಡವನ್ನೂ ಕಲಿಸಲಾಗುತ್ತಿತ್ತು. ವಿದ್ಯೆಯಲ್ಲಿ ಆಸಕ್ತಿ ಉಳ್ಳವರು ಜಾತಿ-ಭೇದವಿಲ್ಲದೆ ಅತೀ ಕಡಿಮೆ ಶುಲ್ಕ ಕಟ್ಟಿ ದಾಖಲಾತಿ ಪಡೆಯಬಹುದಾಗಿತ್ತು. ಆಗಿನ ಮುಖ್ಯೋಪಾಧ್ಯಾಯರಾಗಿ ಬಿ. ಇ. ಎಂ. ಪ್ರೌಢಶಾಲೆಯಲ್ಲಿ ಸೇವೆ ಸಲ್ಲಿಸಿದವರು ಎಸ್.ಎ. ಘುಟಾರ್ಡೋ, ಜಾರ್ಜ್ ಇ. ಐಮನ್, ಕ್ರಿಶ್ಚಿನ ಕ್ಲೇರ, ವೆಂಕಟಕೃಷ್ಣ ರಾವ್, ಪ್ರೇಮದಾಸ್ ಆನಂದ್, ಕೆ. ಶ್ರೀನಿವಾಸಮಯ್ಯ, ಬಿ.ಎ. ಆನಂದ ಮತ್ತು ಯು.ಎಸ್. ರುಕ್ಮಯ.

ಈ ವಿದ್ಯಾಸಂಸ್ಥೆಯಲ್ಲಿ ಕಲಿತ ಗಣ್ಯ ವಿದ್ಯಾರ್ಥಿಗಳೆಂದರೆ ಕರ್ನಾಟಕ ಖ್ಯಾತ ಸಾಹಿತಿ ಶ್ರೀ ಕಯ್ಯಾರ ಕಿಞ್ಞಣ್ಣ ರೈ. ಸುಪ್ರಿಂಕೋರ್ಟಿನ ಉಚ್ಚ ನ್ಯಾಯಾಧೀಶ ಜ॥ ಕೆ.ಎಸ್. ಹೆಗ್ಡೆ, ಡಾ॥ ಡಿ. ವೀರೇಂದ್ರ ಹೆಗ್ಗಡೆಯವರ ತಂದೆಯವರಾದ ರತ್ನವರ್ಮ ಹೆಗ್ಗಡೆ, ವಿಜಯ ಬ್ಯಾಂಕ್‌ನ ಸ್ಥಾಪಕ ಎಂ. ಸುಂದರ್‌ರಾಮ್‌ಶೆಟ್ಟಿ, ಮಾಜಿ ಮೇಯರ್ ಗುಲ್ಜಾರ್‌ಭಾನು, ಮಾಜಿ ಉಪಮೇಯರ್ ಅಮಿತಾಕಲಾ, ಮಾಜಿ ಉಪಮೇಯರ್ ಹಾಗೂ ಕಾರ್ಪೋರೇಟರ್ ಆಗಿರುವ ರಾಜೇಂದ್ರ ಕುಮಾರ್ ಇವರು ಖ್ಯಾತ ಕಬಡ್ಡಿ ಆಟಗಾರರು, ಎಂ. ರಘುನಾಥ ಶೇಟ್ ಮಾಲಕರು ಎಸ್.ಎಲ್. ಶೇಟ್ ಡೈಮಾಂಡ್ ಹೌಸ್, ದಿನೇಶ್ ಪ್ರಭು ಕೊಂಕಣಿ ಸಿನಿಮಾ-ನಾಟಕ ಕಲಾವಿದ, ಪ್ರಭಾಕರ ಪುತ್ರನ್, ಕೈಗಾರಿಕ ಉದ್ಯಮಿ ಜಯರಾಜ್ ಪೈ, ಆಶೀರ್ವಾದ್ ಇಂಜಿನಿಯರಿಂಗ್ ಮಾಲಕರು, ಬಿ.ಜಿ. ಆಚಾರ್ಯ, ಎಂ. ಗಣೇಶ್ ನಿವೃತ್ತ ಪೊಲೀಸ್ ಅಧಿಕಾರಿ, ಪಿ.ವಿ. ಮೋಹನ್ ಸಿಂಡಿಕೇಟ್ ಸದಸ್ಯ ಹಾಗೂ ರಾಜಕಾರಣಿ. ಹೀಗೆ ಇಲ್ಲಿ ವಿದ್ಯಾಭ್ಯಾಸ ಮಾಡಿದ ಅದೆಷ್ಟೋ ವಿದ್ಯಾರ್ಥಿಗಳು ಸಮಾಜದಲ್ಲಿ ಗಣ್ಯರೆನಿಸಿದ್ದಾರೆ. ಇದೇ ವಿದ್ಯಾರ್ಥಿಗಳಿಂದ ಸಮಾಜವನ್ನು ತಿದ್ದುವ ಕೆಲಸಗಳು ಆಗಿವೆ. ಇದಕ್ಕೆ ಮುಖ್ಯ ಕಾರಣ ಶಿಕ್ಷಣವಾಗಿದೆ.

### ೨.೩.೨. ಮಿಲಾಗ್ರಿಸ್ ಶಿಕ್ಷಣ ಸಂಸ್ಥೆ:

೧೯ನೇ ಶತಮಾನದ ಮಧ್ಯಕಾಲದಲ್ಲಿ ಮಂಗಳೂರಿನಲ್ಲಿ ಸ್ಥಾಪನೆಗೊಂಡ ಶಿಕ್ಷಣ ಸಂಸ್ಥೆಗಳಲ್ಲಿ ಮಿಲಾಗ್ರಿಸ್ ಶಿಕ್ಷಣ ಸಂಸ್ಥೆಯು ಒಂದು. ಇದು ೧೮೪೮ರಲ್ಲಿ ಅಂದಿನ ಮಂಗಳೂರಿನ ಧರ್ಮಾಧ್ಯಕ್ಷರಾದ ಬರ್ನಾಡಿನ್‌ರವರಿಂದ ಸ್ಥಾಪನೆಗೊಂಡಿತು. ಅಂದು ಮರದ ದಿಮ್ಮಿ ಹಾಗೂ ಹಲಗೆಗಳಿಂದ ಕಟ್ಟಡದ ಅಂತಸ್ತುಗಳನ್ನು ನಿರ್ಮಿಸಲಾಗಿತ್ತು. ಹಂಚಿನ ಮಾಡು, ಹಲಗೆಗಳ ಮೆಟ್ಟಿಲುಗಳು ಇರುವ ಕಟ್ಟಡಗಳೇ ಅಂದು ಇದ್ದದ್ದು ದೊಡ್ಡ ಮರಗಳ ನೆರಳಿನಲ್ಲಿ ಆ ಸುಂದರ ಪರಿಸರದಲ್ಲಿ ಹಲವಾರು ವಿದ್ಯಾರ್ಥಿಗಳಿಗೆ ಶಿಕ್ಷಣ ದೊರೆಯುತ್ತಿತ್ತು. ಇದರಿಂದಾಗಿಯೇ ನವ ಸಮಾಜದ ನಿರ್ಮಾಣವಾಗಲು ಅಡಿಗಲ್ಲಾಗಿತ್ತು. ೧೮೫೦ರಲ್ಲಿ ಬಾಲಕಿಯರಿಗಾಗಿ ಹಂಪನಕಟ್ಟೆ ಮಿಲಾಗ್ರಿಸ್‌ನಲ್ಲಿಯೇ ಶಾಲೆಯನ್ನು ಸ್ಥಾಪಿಸಲಾಯಿತು. ಆಗ ಇಪ್ಪತ್ನಾಲ್ಕು ವಿದ್ಯರ್ಥಿನಿಯರು ವಿದ್ಯಾರ್ಜನೆಗೆ ಬರುತ್ತಿದ್ದರು. ಆದರೆ ಬಾಲಕಿಯರಿಗಾಗಿ ಸ್ಥಾಪಿಸಿದ ಶಿಕ್ಷಣ ಸಂಸ್ಥೆಯು ಕಾರಣಾಂತರದಿಂದ ಮುಚ್ಚಬೇಕಾಯಿತು. ೧೮೫೯ರಲ್ಲಿ ಪುನಃ ಆಂಗ್ಲೋ ವೆರ್ನಾಕ್ಯುಲರ್ ಶಾಲೆಯನ್ನು ಹುಡುಗರಿಗಾಗಿ, ಇನ್ನೊಂದು ಹುಡುಗಿಯರಿಗಾಗಿ ಪ್ರಾರಂಭಿಸಲಾಯಿತು. ಇದಕ್ಕೆ ಸರಕಾರದಿಂದ ದೇಣಿಗೆಯಾಗಿ ಹುಡುಗರ ಶಾಲೆಗೆ ೬೫ ರೂಪಾಯಿ ಹಾಗೂ ಹುಡುಗಿರ ಶಾಲೆಗೆ ಎಂಟೂವರೆ ರೂಪಾಯಿ ದೇಣಿಗೆ ಸಿಗುತ್ತಿತ್ತು. ಹೀಗೆ ಮಂಗಳೂರಿನ ಜನತೆಗೆ ಶಿಕ್ಷಣದ ಮಹತ್ವದ ಬಗ್ಗೆ ಅರಿವು ಮೂಡಿಸಿದಲ್ಲಿ ಮಿಷನರಿಗಳು ಎಂದೇ ಹೇಳಬಹುದಾಗಿದೆ.

### ೨.೩.೩. ಸರಕಾರಿ ಪ್ರಾಂತೀಯ ಶಾಲೆ:

ಜಾತಿ ಜನಾಂಗದ ತಾರತಮ್ಯವಿಲ್ಲದೇ ಸರ್ವರಿಗೂ ಶಿಕ್ಷಣದ ಅವಕಾಶ ನೀಡುವ ಉದ್ದೇಶದಿಂದಲೇ ಸ್ಥಾಪನೆಯಾದ

ಸಂಸ್ಥೆ ಪ್ರಾಂತೀಯ ಶಾಲೆಯಾಗಿದೆ. "ವಸಾಹತು ಆಡಳಿತ ಶಿಕ್ಷಣಕ್ಕೆ ಒಂದು ಕ್ರಮಬದ್ಧತೆಯನ್ನು ತೋರಿಸಿತು. ಓದುವ ಮಠ, ಕೂಲಿಮಠ, ಅಯ್ಯಗಳ ಪಾಠದಿಂದ 'ಶಾಲೆ' ಎಂಬ ಪರಿಕಲ್ಪನೆಯನ್ನು ಹುಟ್ಟು ಹಾಕಿದವರು ಮಂಗಳೂರಿಗೆ ಕಾಲಿಟ್ಟ ಯುರೋಪಿನ್ ಪಾದ್ರಿಗಳು ಇವರಲ್ಲಿ ಪ್ರೊಟೆಸ್ಟಾಂಟರೂ ಕ್ಯಾಥೋಲಿಕರೂ ಇದ್ದರು ಜರ್ಮನ್ ಮಿಷನರಿ ಶಾಲೆಗಳು, ಕ್ಯಾಥೋಲಿಕ್ ಪಾದ್ರಿಗಳ ಶಾಲೆಗಳು ೧೮೫೦ಕ್ಕೆ ಮುನ್ನ ಪ್ರಾರಂಭವಾಗಿದ್ದವು. ಈ ಶಿಕ್ಷಣ ಸಂಸ್ಥೆಗಳಲ್ಲಿ ಕೆಲವು ಸಂಸ್ಥೆಗಳು ಸುವಾರ್ತ ಪ್ರಚಾರಕ್ಕೆ ಮೀಸಲಾಗಿದ್ದವು. ಈ ಸಂಸ್ಥೆಗಳ ಮೂಲ ಉದ್ದೇಶ ಧಾರ್ಮಿಕ ಪ್ರಚಾರವಾದುದರಿಂದ ಇಲ್ಲಿನ ಜನರಿಗೆ ಅವರ ವಿರುದ್ಧವಾಗಿ ದನಿ ಎತ್ತುವ ಅವಕಾಶವಿರಲಿಲ್ಲ ಮತ್ತು ತಮ್ಮ ಮಕ್ಕಳಿಗೆ ಸ್ಥಳೀಯವಾದ ಸಂಸ್ಕೃತಿ ಆಧಾರಿತ ಶಿಕ್ಷಣ ಇರಬೇಕೆಂಬ ಮನಸ್ಥಿತಿ ಇತ್ತು. ಜೊತೆಗೆ ವಸಾಹತುಶಾಹಿ ಆಡಳಿತ ತಂದುಕೊಟ್ಟ ಇಂಗ್ಲೀಷ್ ಶಿಕ್ಷಣವೂ ಬೇಕೆಂಬ ಹಂಬಲವೂ ಇತ್ತು. ಹೀಗಾಗಿ ಸ್ಥಳೀಯವಾದ ಶಿಕ್ಷಣ ಸಂಸ್ಥೆಯನ್ನು ರಚಿಸಲು ಕ್ರಿಶ್ಚಿಯನ್ನೇತರರು ಮನಸ್ಸು ಮಾಡಿದರು. ಹಲವು ಆಸಕ್ತರು ಈ ಆಶಯದೊಂದಿಗೆ ಒಗ್ಗೂಡಿದರು. ೧೮೬೮ರಲ್ಲಿ ಸ್ಥಳೀಯರು ಸಭೆ ಸೇರಿ ಒಂದು ಸಮಿತಿಯನ್ನು ರಚಿಸಿಕೊಂಡರು. ಸಾರ್ವಜನಿಕರಿಂದ ಹಣವನ್ನು ಸಂಗ್ರಹಿಸಿ ಅದನ್ನು ಒಂದು ಮುದುವಟ್ಟಾಗಿ ಸರಕಾರಕ್ಕೆ ಸಲ್ಲಿಸಿ 'ಪ್ರಾಂತೀಯ ಶಾಲೆ'ಯನ್ನು ಪ್ರಾರಂಭಿಸಲು ಮನವಿ ಸಲ್ಲಿಸಲು ತೀರ್ಮಾನಿಸಲಾಯಿತು. ಅಂದಿನ ಮಂಗಳೂರಿನ ಪ್ರಮುಖರಾದ ಎಂ. ರಾಮಪ್ಪಯ್ಯ (ಶಿರಸ್ತೇದಾರರ), ಶ್ರೀನಿವಾಸರಾವ್, ಎಲ್. ರಾಮಚಂದ್ರಯ್ಯ, ಎನ್. ಸುಂದರರಾವ್, ಎನ್. ತಿಮ್ಮಪ್ಪಯ್ಯ, ಸಾದತ್‌ಖಾನ್, ಸಿ. ರಂಗಪ್ಪ, ನಾರಾಯಣ ಪೈ, ಟಿ. ಮುತ್ತುಸ್ವಾಮಿ ಅಯ್ಯರ್‌ಗಳನ್ನು ಒಳಗೊಂಡ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿ ಹಣ ಸಂಗ್ರಹದ ಹೊಣೆ ಹೊತ್ತಿತ್ತು"[೧೩]

ಪ್ರಾಂತೀಯ ಶಾಲೆ ಪ್ರಾರಂಭಿಸುವುದಕ್ಕಾಗಿ ಮದ್ರಾಸ್ ಪ್ರಾಂತ್ಯಕ್ಕೆ ಒಳಪಟ್ಟ ದಕ್ಷಿಣ ಕನ್ನಡ ಜಿಲ್ಲೆಯ ನಾಲ್ಕು ತಾಲೂಕು ಮಂಗಳೂರು, ಉಡುಪಿ, ಕುಂದಾಪುರ, ಉಪ್ಪಿನಂಗಡಿಯಲ್ಲಿ ಶಾಲೆಯನ್ನು ಪ್ರಾರಂಭಿಸುವ ಉದ್ದೇಶದಿಂದ ಹಣ ಸಂಗ್ರಹವನ್ನು ಮಾಡಲಾಗಿ ಒಟ್ಟು ೬೫,೦೦೦/- ರೂಪಾಯಿಗಳು ಸಂಗ್ರಹವಾಗಿ ಇದನ್ನು ೧೮೬೫ರ ಆಗಸ್ಟ್ ೨೮ ರಂದು ದಕ್ಷಿಣ ಕನ್ನಡದ ಕಲೆಕ್ಟರ್ ಆಗಿದ್ದ ಡಬ್ಲ್ಯು.ಎಂ.ಕಾಡೆಲ್ ಅವರಿಗೆ ಸಲ್ಲಿಸಿ ಮಂಗಳೂರಿನಲ್ಲಿ ಸರಕಾರದ ವತಿಯಿಂದ ಶಾಲೆಯನ್ನು ಸ್ಥಾಪಿಸಬೇಕೆಂಬ ಮನವಿ ಸಲ್ಲಿಸಿದರು. ಮನವಿಯ ಕೆಲವು ಅಂಶಗಳು ಹೀಗಿದ್ದವು: "ಮಂಗಳೂರು ನಗರದ ನಾಗರಿಕ ಮಕ್ಕಳಿಗೆ ಈ ಪ್ರದೇಶದಲ್ಲಿ ಶಾಲೆಯೊಂದು ಇರುವುದಿಲ್ಲ. ಉನ್ನತ ಶಿಕ್ಷಣಕ್ಕಾಗಿ ಇಲ್ಲಿನ ಮಕ್ಕಳನ್ನು ಅಧಿಪತ್ಯದ ನಗರಕ್ಕೆ (ಮದರಾಸಿಗೆ) ಕಳುಹಿಸಬೇಕಾಗಿದೆ, ಹೀಗೆ ಕಳುಹಿಸುವುದು ದುಬಾರಿಯಾಗುತ್ತದಲ್ಲದೆ ಜನಸಾಮಾನ್ಯರಿಗೆ ಅಸಾಧ್ಯವಾದುದಾಗಿದೆ. ಅಧಿಪತ್ಯದ ನಗರದ ಸಮೀಪವಿರುವ ನಗರಗಳಲ್ಲಿ ಸರಕಾರ ಈಗಾಗಲೇ ಶಾಲಾ-ಕಾಲೇಜುಗಳನ್ನು ಪ್ರಾರಂಭಿಸಿದೆ. ಅಧಿಪತ್ಯದಿಂದ ದೂರವಾಗಿರುವ ಮಂಗಳೂರಿಗೆ ಈ ಸೌಲಭ್ಯವಿರುವುದಿಲ್ಲ. ನಗರದಲ್ಲಿ ಈಗ ಇರುವ ಶಾಲೆಗಳಲ್ಲಿ ನೀಡುತ್ತಿರುವ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೆಲವು ಆಕ್ಷೇಪಣೆಗಳಿವೆ ಈ ಹಿನ್ನೆಲೆಯ್ಲಲಿ ಸಾರ್ವಜನಿಕ ಶಿಕ್ಷಣ ಸಂಸ್ಥೆಯೊಂದರ ಅಗತ್ಯವಿದ್ದು ಸರಕಾರ ಇಲ್ಲಿ ಶಾಲೆಯೊಂದನ್ನು ಸ್ಥಾಪಿಸಬೇಕಾಗಿದೆ".[೧೪]

ಸಾರ್ವಜನಿಕರ ಈ ಮನವಿಯನ್ನು ಸ್ವೀಕರಿಸಿದ ಜಿಲ್ಲಾ ಕಲೆಕ್ಟರ್ ಸರಕಾರಕ್ಕೆ ಪತ್ರ ಬರೆದವರು ಆ ಪತ್ರದಲ್ಲಿ "ಇಲ್ಲಿನ ಜನ ದೊಡ್ಡ ಮೊತ್ತವೊಂದನ್ನು ಸಂಗ್ರಹಿಸಿ ಸ್ವಯಂ ಪ್ರೇರಿತರಾಗಿ ಶಾಲೆಯೊಂದನ್ನು ಸ್ಥಾಪಿಸಲು ಮುಂದೆ ಬಂದಿದ್ದಾರೆ. ಇವರ ಮನವಿಯನ್ನು ಪುರಸ್ಕರಿಸಿ ನಗರದಲ್ಲಿ ಇಂಗ್ಲೀಷ್ ಮಾಧ್ಯಮದ ಶಾಲೆಯೊಂದನ್ನು ಸ್ಥಾಪಿಸಬೇಕು ಮತ್ತು ಈ ಶಾಲೆಯ ಮುಖ್ಯಸ್ಥರನ್ನಾಗಿ ಸಮರ್ಥ ವ್ಯಕ್ತಿಯೊಬ್ಬರನ್ನು ನೇಮಿಸಬೇಕು."[೧೫] ಎಂದು ಶಿಫಾರಸ್ಸು ಮಾಡಿದವರು ಆಗ ಸಾರ್ವಜನಿಕ ಶಿಕ್ಷಣ ನಿರ್ದೇಶಕರಾಗಿದ್ದ ಜಿ಼ರ್ ಬರ್ಟನ್ ಪಾವೆಲ್‌ರವರು.

ಹೀಗೆ ಸರಕಾರಕ್ಕೆ ಬರೆದ ಪತ್ರದಲ್ಲಿ ಜಿಲ್ಲೆಯ ಕಲೆಕ್ಟರ್ ಆದ ಡಬ್ಲ್ಯು. ಎಂ. ಕಾಡೆಲ್‌ರವರೂ ಸಾರ್ವಜನಿಕ

ಕೋರಿಕೆಯನ್ನು ಮನ್ನಣೆ ಮಾಡಬೇಕಾಗಿ ಸರಕಾರಕ್ಕೆ ತಿಳಿಸಿದರು. "ಮನವಿದಾರರರು ಸುಶಿಕ್ಷಿತ ನಾಗರಿಕರಾಗಿದ್ದಾರೆ ಮತ್ತು ಉತ್ತಮ ಶಾಲೆಯನ್ನು ಪ್ರಾರಂಭಿಸಬೇಕೆಂಬ ಆಶಯವನ್ನು ಹೊಂದಿದ್ದಾರೆ. ಆದುದರಿಂದ ಇಂಗ್ಲೀಷ್ ವಿಶ್ವವಿದ್ಯಾನಿಲಯದಿಂದ ಪದವಿ ಪಡೆದ ಒಬ್ಬರನ್ನು ಪ್ರಾಂತೀಯ ಶಾಲೆಯ ಮುಖ್ಯಸ್ಥರನ್ನಾಗಿ ನೇಮಿಸುವ ಅಗತ್ಯವಿದೆ. ನಾನು ಆಕ್ಸ್‌ಫರ್ಡ ಅಥವಾ ಕೇಂಬ್ರಿಡ್ಜ್‌ನಿಂದ ಪದವಿ ಪಡೆದವರನ್ನು ಶಾಲೆಯ ಮುಖ್ಯಸ್ಥರನ್ನಾಗಿ ನೇಮಿಸುವಂತೆ ಶಿಫಾರಸ್ಸು ಮಾಡುತ್ತೇನೆ."[೧೬] ಎಂದು ಸರಕಾರಕ್ಕೆ ತಿಳಿಸಿದರು. ಆ ಸಮಯದಲ್ಲಿ ಆಡಳಿತ ಎಷ್ಟೇ ಸುಲಭವಾಗಿದ್ದರೂ ಮಂಗಳೂರಿನಲ್ಲಿ ರೈಲುಗಳ ಓಡಾಟ ಪ್ರಾರಂಭವಾಗಿರಲಿಲ್ಲ. ಆದ್ದರಿಂದ ಹಡಗಿನ ಮೂಲಕವೇ ಪತ್ರ ವ್ಯವಹಾರ ನಡೆಯುತ್ತಿತ್ತು. ಸರಕಾರಕ್ಕೆ ತಲುಪಿದ ಬಳಿಕ ಹತ್ತು ದಿನದಲ್ಲಿ ಶಾಲೆಯನ್ನು ಪ್ರಾರಂಭಿಸಲು ಆದೇಶ ಬಂತು. ದಿನಾಂಕ: ೨೧-೦೯-೧೮೬೫ರಂದು ಸರಕಾರದ ಕಡೆಯಿಂದ ಪ್ರಾಂತೀಯ ಶಾಲೆ ಆರಂಭಿಸಲು ಮಂಜೂರಾತಿ ನೀಡಿತು.

ಮಂಗಳೂರಿನಲ್ಲಿ ಸರಕಾರದ ಶಾಲೆಯೊಂದನ್ನು ಪ್ರಾರಂಭಿಸುವ ಜವಾಬ್ದಾರಿ ಮಲಬಾರ್ ಮತ್ತು ಕೆನರಾ ಶಾಲೆಗಳ ಉಪನಿರೀಕ್ಷಕರಾದ ಗಾರ್ತ್‌ವೈಟ್ ನಿರ್ವಹಿಸಿದರು. ಇವರು ೨೮-೦೯-೧೮೬೮ರಲ್ಲಿ 'ಪ್ರಾಂತೀಯ ಶಾಲೆ, ಮಂಗಳೂರು' (Provincial School, Mangalore) ಎಂಬ ಹೆಸರನಿಟ್ಟು ಶಾಲೆಯನ್ನು ಆರಂಭಿಸಿದರು. ಶಾಲೆ ಪ್ರಾರಂಭವಾದ ಸಮಯದಲ್ಲಿ ೩೧೫ ವಿದ್ಯಾರ್ಥಿಗಳಿದ್ದರು. ಶಾಲೆಯು ಪ್ರಾರಂಭವಾದ ಮೇಲೆ ಗಾರ್ತ್‌ವೈಟ್‌ರ ಸಹಾಯಕರಾಗಿದ್ದ ವ್ಯಾಟ್‌ಸನ್‌ರವರು ಪ್ರಥಮ ಸಹಾಯಕರಾಗಿ ಮತ್ತು ಖಾಯಂ ಮುಖ್ಯೋಪಾಧ್ಯಾಯರು ಬರುವವರೆಗೆ ಪ್ರಭಾರ ಮುಖ್ಯೋಪಾಧ್ಯಾಯರಾಗಿದ್ದರು. ಶಾಲೆ ಸ್ಥಾಪಕರ ಆಶಯವೇನೆಂದರೆ ಯುರೋಪಿನಿಂದ ಪದವಿ ಪಡೆದ ವ್ಯಕ್ತಿ ನೇಮಕವಾಗಬೇಕೆಂಬುದಾಗಿದೆ. ಅದರಂತೆ ಡಬ್ಲ್ಯು.ಇ.ಆರ್ಮ್ಸ್.ಜಿ.ಯವರು ಮುಖ್ಯಸ್ಥರಾಗಿ ನೇಮಕಗೊಂಡರು. ಇವರು ಅಧಿಕಾರ ವಹಿಸಿದ ಕೂಡಲೇ ಫಸ್ಟ್ ಎಕ್ಸಾಮಿನೇಶನ್ ಇನ್ ಆರ್ಟ್ಸ್ (ಎಫ್.ಎ.) ತರಗತಿಯನ್ನು ಪ್ರಾರಂಭಿಸಿದರು. ಈ ಕೋರ್ಸನ್ನು ಪ್ರಾರಂಭಿಸಲು ಸರಕಾರ ಒಪ್ಪಿಗೆ ಸೂಚಿಸಿತ್ತಲ್ಲದೆ ದ್ವಿತೀಯ ದರ್ಜೆ ಕಾಲೇಜಾಗಿ ಮಾನ್ಯ ಮಾಡಿತು.

ಶಾಲೆ ಪ್ರಾರಂಭವಾದ ದಿನದಿಂದ ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ ಬೋಧನೆ ಮಾಡಲಾಗುತ್ತಿತ್ತು. ೧೮೭೧ರ ಬಳಿಕ ಸಂಸ್ಕೃತ ಭಾಷೆಯನ್ನು ಸೇರಿಸಲಾಯಿತು. ೧೮೭೨-೭೩ನೇ ಅವಧಿಯಲ್ಲಿ ದೊರಕುತ್ತಿದ್ದ ಉನ್ನತ ಶಿಕ್ಷಣವೆಂದರೆ ಎಫ್.ಎ. ಮಾತ್ರ. ೧೮೮೮ರಲ್ಲಿ ಸಂತ ಅಲೋಶಿಯಸ್ ಕಾಲೇಜಿನಲ್ಲಿ ಪದವಿ ತರಗತಿ ಪ್ರಾರಂಭವಾಗುವವರೆಗೆ ಉನ್ನತ ಶಿಕ್ಷಣವೆಂದರೆ ಮದರಾಸಿಗೆಯೇ ಹೋಗಬೇಕಿತ್ತು. ಈ ಕಾರಣದಿಂದಾಗಿ ೧೮೭೨ರಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ಜೇಮ್ಸ್ ಬ್ರಾಡ್‌ಷಾ ಬಿ.ಎ. ಪದವಿ ಕೋರ್ಸನ್ನು ಪ್ರಾರಂಭಿಸಲು ಸರಕಾರಕ್ಕೆ ಒತ್ತಡ ಹಾಕಿದರೂ ಅದು ವಿಫಲವಾಯಿತು. ೧೮೭೫ರಲ್ಲಿ ಕರ್ನಲ್ ಆರ್.ಎಂ. ಮ್ಯಾಕ್‌ಡೊನಾಲ್ಡ್ ಸಾರ್ವಜನಿಕ ಶಿಕ್ಷಣ ನಿರ್ದೇಶಕರಾಗಿ ಅಧಿಕಾರ ವಹಿಸಿಕೊಂಡ ನಂತರ ಸರಕಾರಿ ಶಾಲೆಯಲ್ಲಿ ಆಡಳಿತಾತ್ಮಕ ಬದಲಾವಣೆ ತಂದರು. ಚಾಲ್ತಿಯಲ್ಲಿದ್ದ ಪಠ್ಯಕ್ರಮವನ್ನು ಪರಿಷ್ಕರಿಸಿ ಶಾಲೆಯ ಬೋಧನೆಯ ಅವಧಿಯನ್ನು ಕಡಿತಗೊಳಿಸಿ ವ್ಯಾಯಾಮ ಮತ್ತು ಕ್ರಾಫ್ಟ್‌ಗೆ ಹೆಚ್ಚಿನ ಮಹತ್ವ ನೀಡಿದರು ಮತ್ತು ಮಕ್ಕಳಿಗೆ ವಾರಕ್ಕೊಮ್ಮೆ ತೌಲನಿಕ ಪರೀಕ್ಷೆ ಮಾಡುವ ಮೂಲಕ ನಿರಂತರ ಮೌಲ್ಯಮಾಪನದ ರೀತಿಯ ವ್ಯವಸ್ಥೆಯನ್ನು ಜಾರಿಗೆ ತಂದರು. ೧೮೭೫ಲ್ಲಿ ನಾಲ್ಕನೆ ತರಗತಿಯನ್ನು ಎರಡು ಭಾಗವಾಗಿ ವಿಂಗಡಿಸಲಾಯಿತು. ಒಂದು ಅಪ್ಪರ್ ಫೋರ್ತ್ ಮತ್ತೊಂದು ಲೋಯರ್ ಫೋರ್ತ್ ಆಗಿ ಬದಲಾವಣೆ ತಂದರು. ಬಂಗಾಳದಲ್ಲಿ ಸೆಕೆಂಡರಿ ಶಾಲೆಗಳನ್ನು ಹೊಸ ಹೆಸರಿನಿಂದ ಕರೆಯುವ ಪದ್ಧತಿ ಜಾರಿಗೆ ತಂದರು. ಅದರಂತೆ ಮದರಾಸು ಸರಕಾರವೂ ತನ್ನ ಅಧೀನದಲ್ಲಿ ಬರುವ ಸರಕಾರಿ ಶಾಲೆಗಳಿಗೆ ಹೊಸ ನಾಮಕರಣವನ್ನು ಮಾಡಿತು. ಇದರಿಂದಾಗಿ ೧೮೭೯ರಲ್ಲಿ ಪ್ರಾಂತೀಯ ಬದಲಾಯಿಸಿ 'ಸರಕಾರಿ ಕಾಲೇಜು, ಮಂಗಳೂರು' ಆಗಿ ಹೆಸರಿಸಲಾಯಿತು ಎಂದು ದಾಖಲೆಗಳು ದೃಢೀಕರಿಸುತ್ತವೆ.

ಹೀಗೆ ೧೮೬೫ರಲ್ಲಿ ಸ್ಥಾಪನೆಗೊಂಡ ಪ್ರಾಂತೀಯ ಶಾಲೆ ಹಲವಾರು ಎಡರು ತೊಡರುಗಳನ್ನು ಎದುರಿಸುತ್ತಾ ಮಂಗಳೂರಿನಲ್ಲಿ ಜನರ ಜೀವನ ಯೋಚನಾಲಹರಿ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗೆ ಕಾರಣವಾದ ಸಂಸ್ಥೆ ಸುಮಾರು ೧೫೨ ವರ್ಷಗಳ ಇತಿಹಾಸ ಹೊಂದಿದೆ.

### ೨.೩.೪.ಸಂತ ಅಲೋಶಿಯಸ್ ಕಾಲೇಜು:

ಒಂದೂವರೆ ಶತಮಾನದ ಹಿಂದೆ ಶಿಕ್ಷಣವೆಂಬ ಸಂಪ್ರದಾಯವೇ ಇಲ್ಲದ, ಶಿಕ್ಷಣ ಸಂಸ್ಥೆಗಳೇ ಇಲ್ಲದ ಸಮಾಜವನ್ನೂ, ವಿದ್ಯೆಯ ಗಂಧಗಾಳಿಯೇ ಇಲ್ಲದ ಜನಸಮುದಾಯವನ್ನೂ, ಶಾಲೆಗೆ ಹೋಗಿ ಏನು ಮಣ್ಣು ಹೊರಲಿಕ್ಕಿದೆ ಎಂಬ ಅಭಿಮತ ಪ್ರಚಲಿತವಾಗಿದ್ದ ಕಾಲವೊಂದನ್ನು ಊಹಿಸಿಕೊಂಡರೆ ಸಂತ ಅಲೋಶಿಯಸ್ ಕಾಲೇಜು ಶೈಕ್ಷಣಿಕ ವಲಯದಲ್ಲಿ ಮಾತ್ರವಲ್ಲ ಸಾಮಾಜಿಕ ವಲಯದಲ್ಲಿ ಬದಲಾವಣೆಯನ್ನು ತರಲು ಪ್ರಯತ್ನಿಸಿದೆ. ಹತ್ತೊಂಬತ್ತನೇ ಶತಮಾನದಲ್ಲಿ ಈಗಿನ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ಶಿಕ್ಷಣ ಪರಿಸರ ಹಾಗೂ ಮನೋಭಾವ ಹೇಗಿತ್ತು ಎಂಬುದರ ಬಗ್ಗೆ ನಿವೃತ್ತ ಪ್ರಾಂಶುಪಾಲರಾದ ರೆ| ಫಾದರ್ ಪ್ರಶಾಂತ ಮಾಡ್ತಾ ತುಳು ಭಾಷೆಯ ಹಾಡಿನ ಮೂರು ಸಾಲುಗಳಲ್ಲಿ ಸಂಕ್ಷಿಪ್ತವಾಗಿ ವಿಶದೀಕರಿಸಿದ್ದಾರೆ.

ಕಮಲಾ ಪೋಪುಜನಾ ಇಂಗ್ರೋಜಿ ಶಾಲೆಗ್

ಪೋಪೆ ಪೋಪೆ ಪಣ್ವಾಲ್ ಆಲ್

ಲೇಡಿಸ್ ಕೊಡೆ ಕೇಣ್ವಾಲ್

ಈ ಮೂರು ಸಾಲುಗಳಿಗೆ ನೂರ ಅರ್ಥಗಳಿವೆ. "ಕಮಲ ಎಂಬ ಹಸುಳೆಗೆ ಅನಾಮಧೇಯ ನಿರೂಪಕನೊಬ್ಬ ಈ ಪ್ರಶ್ನೆಯನ್ನು ಒಡ್ಡುತ್ತಾನೆ– ಕಮಲಾ ನೀನು ಶಾಲೆಗೆ ಹೋಗುವುದಿಲ್ಲವೆ? ಅದಕ್ಕೆ ಕಮಲ ಕೊಡುವ ಉತ್ತರ ಹೋಗ್ತೇನೆ, ಹೋಗ್ತೇನೆ! ಈ ಆಶೆಯೊಂದಿಗೆ ಅವಳ ಇನ್ನೊಂದು ಬೇಡಿಕೆ. ಶಾಲೆಗೆ ಹೋಗಲು ಬಣ್ಣದ ಲೇಡಿಸ್ ಕೊಡೆಯೂ ಬೇಕು. ಇದು ಈ ಕವನದ ಪಠ್ಯ ಅದರ ಸರಳಾನುವಾದವಾಗಿದೆ. ಅದರ ತೆರೆಮರೆಯಲ್ಲಿರುವ ಅಧಿಪಠ್ಯ ಹೇಳಿದ್ದು ಯಾವುದು? ದಕ್ಷಿಣ ಕನ್ನಡದಲ್ಲಿ ಇಗರ್ಜಿ ಇದ್ದಲ್ಲೆಲ್ಲಾ ಇಗರ್ಜಿಯ ಜಗಲಿಗಳಲ್ಲಿ ಇಂಗ್ರೋಜಿ ಶಾಲೆ ಎಂದು ಕರೆಯಲಾಗುತ್ತಿದ್ದಲ್ಲಿ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿದ್ದರು. ಶಿಕ್ಷಣವೆಂಬ ಸಂಪ್ರದಾಯ ದಾಂಗುಡಿಯಿಡುತ್ತಿರುವ ಸಂದರ್ಭದಲ್ಲಿ ಹುಡುಗರು ಹೊಲಕ್ಕೆ ಹೋಗುವ ಅಥವಾ ಅಪ್ಪನ ಕುಲಕಸುಬುಗಳನ್ನು ಕಲಿಯುವ ಬದಲಾಗಿ ಸ್ಲೇಟು ಕಡ್ಡಿಗಳನ್ನು ಚೀಲದಲ್ಲಿರಿಸಿ ಶಾಲೆಗೆ ಹೋಗಲು ಪ್ರಾರಂಭಿಸಿದರು. ಅಣ್ಣ, ತಮ್ಮ ತಲೆ ಬಾಚಿಕೊಂಡು, ಸಡಗರದಿಂದ ಶಾಲೆಗೆ ಹೋಗುತ್ತಿರುವಾಗ, ಅವಕಾಶದಿಂದ ವಂಚಿತಳಾಗಿ ಕಿಟಕಿಯಿಂದ ಇಣುಕಿ ಅವರನ್ನೇ ನಿಸ್ತೇಜ ಕಣ್ಣುಗಳಿಂದ ನೋಡುತ್ತಿದ್ದ ತಂಗಿಯರಲ್ಲಿಯೂ ಸಂಭ್ರಮದಿಂದ ಶಾಲೆಗೆ ಹೋಗುವ ಅಂದರೆ ಹೊಸ್ತಿಲು ದಾಟಿ ಹೊರ ಹೋಗುವ ಆಶೆ ಮಿಂಚದೆ ಹುಡುಗಿಯರನ್ನು 'ಒಳಗೆ ಬಾರೇ ಕುದುರೆ' ಎಂದು ಒಳ ಸೇರಿಸುತ್ತಾ, ಹುಡುಗರನ್ನು 'ಹೊರ ಹೋಗಿ ಆಡೋ ಕತ್ತೆ' ಎಂದು ಅಮ್ಮನೇ ಅವರನ್ನು ಹೊರದಬ್ಬುವ ಸಮಾಜ. ಈಗ ಹುಡುಗಿಯನ್ನು ಶಾಲೆಗೆ, ಅದೂ ಕ್ರಿಶ್ಚನ್ನರ ಶಾಲೆಗೆ ಕಳುಹಿಸುವುದು ಬಹಳ ತಳಮಳದ ವಿಷಯವಾಗಿತ್ತು. ಮನೆಯಿಂದ ಶಾಲೆಗೆ ಇರುವ ಆ ದಾರಿ, ಏನೇನೋ ಸಂಭವಿಸಲು ಸಾಧ್ಯತೆಯಿರುವ ಪ್ರದೇಶದ ವ್ಯಾಪ್ತಿ ಅದು ಸೈದ್ಧಾಂತಿಕ ಜಾಗ. ಹುಡುಗಿಯರಿಗೆ ನಿಷಿದ್ಧ ಜಾಗ. ಹೆಣ್ಣು ಏಕಾಂಗಿಯಾಗಿ ಸುರಕ್ಷಿತವಾಗಿರಬಹುದಾದ ಸ್ಥಳ ವ್ಯಾಪ್ತಿಯು ಏನಿದ್ದರೂ ಅಡುಗೆ ಮನೆ, ದೇವರ ಮನೆ, ಅಂಗಳ, ಹಿತ್ತಲು ಎಂಬುವುದು ಜನರ ಭಾವನೆಯಾಗಿತ್ತು.

ನಂತರ ಹುಡುಗಿ ಬಣ್ಣದ ಲೇಡಿಸ್ ಕೊಡೆ ಕೇಳ್ತಾಳೆ ಶಾಲೆಗೆ ಹೋಗುವುದು ಸರಿ. ಆದರೆ ಲೇಡಿಸ್ ಕೊಡೆ ಯಾಕೆ? ಈ ಬೇಡಿಕೆಯನ್ನು ಕೇಳಿದ ಅಪ್ಪ ಅಮ್ಮನಿಗೆ ಎದೆ ದಸಕ್ಕಾಗಿರಬೇಕು. ಲೇಡಿಸ್ ಸೈಕಲ್, ಲೇಡಿಸ್ ವ್ಯಾನಿಟ ಬ್ಯಾಗ್, ಲೇಡಿಸ್ ಕೊಡೆ ಇವೆಲ್ಲಾ ಗರತಿ ಗೌರಮ್ಮನವರಿಗೆ ಸಲ್ಲದ ಫ್ಯಾಶನ್ ಸಂಕೇತಗಳು. ಲೇಡಿಸ್ ಕೊಡೆ ಕೈಯಲ್ಲಿ ತಿರುಗಿಸುವವರು ಬಿದಿರ ಸಲಾಕೆಯಂತೆ ನೆಟ್ಟನಗೆ ನಡೆಯುವುದು ಕಷ್ಟ. ದೇಹ ಬಳುಕಬೇಕಾಗುತ್ತದೆ, ಸೊಂಟ ಉಳುಕಿದಂತೆ ನಡೆಯಬೇಕಾಗುತ್ತದೆ. ಕಲಿತ ಹುಡುಗಿ ಕುದುರೆ ನಡಿಗೆಯಂತೆ ! ಹುಡುಗಿಯನ್ನು ಶಾಲೆಗೆ ಕಳುಹಿಸುವ ಆ ಸಮಸ್ಯೆಗಳು ಹಲವು. ಇಂಗ್ರೋಜಿ ಶಾಲೆಗೆ ಹುಡುಗಿಯನ್ನು ಕಳುಹಿಸುವುದು ಒಂದು ತಲ್ಲಣ್ಣವಾದರೆ, ಲೇಡಿಸ್ ಕೊಡೆಯ ಬೇಡಿಕೆ ಎರಡನೇ ತಲ್ಲಣ, ಮನೆಯಿಂದ ಹೊರ ಹೋಗುವುದು ಮತ್ತೊಂದು ತಲ್ಲಣ”[೧೧] ಪಾಶ್ಚಾತ್ಯ ಶಿಕ್ಷಣ ಪ್ರಾರಂಭವಾದ ಆ ಹಂತದಲ್ಲಿ ಒಂದು ಸಮಾಜ ಅನುಭವಿಸಿದ ಯಾತನೆಯನ್ನೂ, ಹೈದ–ಗೂಡೆಯರು ಶಾಲೆಗೆ ಹೋಗಲು ಪ್ರಾರಂಭಿಸಿದ ಹಂತದಲ್ಲಿ ಇದ್ದ ತವಕಗಳನ್ನು ಈ ಪುಟ್ಟ ಕವನದಲ್ಲಿ ಹಿಡಿದಿರಿಸಿದ್ದಾರೆ.

೧೯ನೇ ಶತಮಾನದಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಮುಂಬಯಿ ಪ್ರಾಂತ್ಯಕ್ಕೂ ದಕ್ಷಿಣ ಕನ್ನಡ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ಯಕ್ಕು ಸೇರಿಸಿದ್ದರು. ಮುಂಬಯಿಯ ಕ್ರಿಶ್ಚಿಯನ್ ಸಮುದಾಯದವರು ಅಲ್ಲಿಯ ಕ್ರೈಸ್ತ ವಿದ್ಯಾಸಂಸ್ಥೆಗಳಲ್ಲಿ ಉನ್ನತ ವ್ಯಾಸಂಗ ಪಡೆದು ಬ್ರಿಟಿಷ್ ಸರಕಾರದ ಉದ್ಯೋಗಗಳನ್ನು ಪಡೆದು ಶ್ರೀಮಂತರಾಗುತ್ತಿದ್ದರು. ತಮ್ಮ ಸಮುದಾಯವು ಆರ್ಥಿಕವಾಗಿ ಅಭ್ಯುದಯ ಸಾಧಿಸಬೇಕಾದರೆ ಇಂಗ್ಲೀಷ್ ವಿದ್ಯಾಭ್ಯಾಸ, ಕೈ ತುಂಬಾ ಸಂಬಳ ಹಾಗೂ ಗೌರವ ದೊರೆಯಬೇಕು ಎಂದು ಮಂಗಳೂರಿನ ಕ್ರೈಸ್ತ ಸಮುದಾಯದವರಿಗೆ ಹೊಳೆಯಿತು. ಮುಂಬಯಿಯಲ್ಲಿ ಯೇಸುಸಭೆಯವರು ಅಂದರೆ ಜೆಜ್ವಿಟ್ ಸಂಘದವರು ನಡೆಸುತ್ತಿದ್ದ ಸಂತ ಝೇವಿಯರ್ಸ್ ಕಾಲೇಜು, ಸಂತ ಮೇರಿಸ್ ಹೈಸ್ಕೂಲ್ ಮುಂತಾದ ಪ್ರತಿಷ್ಠಿತ ಸಂಸ್ಥೆಗಳು ಜನರಿಗೆ ಒದಗಿಸಿ ಶಿಕ್ಷಣದ ಅವಕಾಶದಿಂದಾಗಿ ಆ ಪ್ರದೇಶದ ಕ್ರೈಸ್ತ ಸಮುದಾಯವು ಸಾಧಿಸಿದ ಪ್ರಗತಿಯನ್ನು ಮನಗಂಡು, ಮಂಗಳೂರಿನ ಕ್ರೈಸ್ತ ಸಮುದಾಯಕ್ಕೂ ತಾವೂ ಇದೇ ನಿಟ್ಟಿನಲ್ಲಿ ಪ್ರಗತಿ ಸಾಧಿಸಬೇಕಾದರೆ ಇಂಗ್ಲೀಷ್ ಶಿಕ್ಷಣ ಅತ್ಯಗತ್ಯ ಎಂದು ಯೋಚಿಸಿದರು. ಹೀಗೆ ಉನ್ನತ ಶಿಕ್ಷಣದ ಆಸೆಯು ಹುಟ್ಟಿ, ಮಂಗಳೂರಿನ ಕ್ರೈಸ್ತ ಸಮುದಾಯವು ರೋಮ್ ನಗರದ ಜಗದ್ಗುರು ಪೋಪ್ ಅವರಿಗೆ ಮಂಗಳೂರಿನಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲು 'ಯುರೋಪಿನ ಶಾಲಾ ಮೇಷ್ಟ್ರು'ಗಳೆಂದೇ ಖ್ಯಾತಿ ಪಡೆದ ಜೆಜ್ವಿಟರನ್ನು ಮಂಗಳೂರಿಗೆ ಕಳುಹಿಸಬೇಕೆಂದು ಪದೇ ಪದೇ ಕೋರಿಕೆ ಪತ್ರಗಳನ್ನು ಕಳುಹಿಸಿತು. ಜೆಜ್ವಿಟರನ್ನು 'ಯುರೋಪಿನ ಶಾಲಾ ಮೇಷ್ಟ್ರುಗಳೆಂದು ಕರೆಯಲು ಕಾರಣವೇನೆಂದರೆ ಯುರೋಪಿನಲ್ಲಿ ಶಿಕ್ಷಣ ಸಂಸ್ಕೃತಿಗೆ ನಾಂದಿ ಹಾಡಿದವರು ಇವರು. ೧೮೭೪ರಲ್ಲಿ ಬಂಟ್ವಾಳದ ಶ್ರೀ ಎ.ಜೆ.ಕುವೆಲೊ ಎಂಬ ಮಹನೀಯರ ನೇತೃತ್ವದಲ್ಲಿ, ಹದಿನೆಂಟು ಕ್ರೈಸ್ತ ಮುಂದಾಳುಗಳ ಸಭೆಯನ್ನು ಕರೆದು ೨೫೦ ಜನರ ಸಹಿಯೊಂದಿಗೆ ಕೋರಿಕೆ ಪತ್ರವನ್ನು ರೋಮ್ ನಗರಕ್ಕೆ ರವಾನಿಸಿದರು. ಸಂತ ಅಲೋಶಿಯಸ್ ಕಾಲೇಜನ್ನು ಸ್ಥಾಪಿಸಿದವರು. ಕ್ರೈಸ್ತ ಧರ್ಮದ ಒಂದು ಜಾಗತಿಕ ಧಾರ್ಮಿಕ ಸಂಸ್ಥೆಗೆ ಸೇರಿದ ಜೆಜ್ವಿಟರು ಅಥವಾ ಯೇಸು ಸಭೆಯವರು. ಇವರು ೧೮೮೦ ಜನವರಿ ಹನ್ನೆರಡರಂದು ಪ್ರಾರಂಭಿಸಿದರು. ೧೮೭೮ರಲ್ಲಿ ಜೆಜ್ವಿಟ್ ಸಂಸ್ಥೆಯ ಕಾರ್ಯಕರ್ತರಾಗಿ ಬಂದ ಫಾದರ್ ಜೋಸೆಫ್ ವಿಲ್ಲಿ ಇವರು ಮಾರ್ಗದರ್ಶನದಲ್ಲಿ ಸಂತ ಅಲೋಶಿಯಸ್ ಮಂಗಳೂರಿನ ಕೊಡಿಯಾಲ್ ಬೈಲಿನಲ್ಲಿ ತಾತ್ಕಾಲಿಕ ಕಟ್ಟಡದಲ್ಲಿ ಆರಂಭವಾಯಿತು. ಕಲಿಸುವ ವಿಷಯಗಳು ಮೌಲ್ಯಶಿಕ್ಷಣ, ಇಂಗ್ಲೀಷ್, ಕನ್ನಡ ಹಾಗೂ ಲ್ಯಾಟನ್ ಭಾಷಾ ವಿಷಯಗಳು, ಗಣಿತ, ಚರಿತ್ರೆಯೊಂದಿಗೆ ಭೂಗೋಳ, ಪ್ರಾಕೃತಿಕ ವಿಜ್ಞಾನ ವಿಷಯಗಳು ಕಲಿಸುತ್ತಿದ್ದ ಪಾಠಗಳಾಗಿದ್ದವು. ೧೮೮೦ರಲ್ಲಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು, ೧೮೮೨ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯಕ್ಕೆ ಪದವಿ ಪೂರ್ವ ಕಾಲೇಜು ಆಗಿ ೧೮೮೭ರಲ್ಲಿ ಮೊತ್ತ ಮೊದಲ ಫಸ್ಟ್‌ಗ್ರೇಡ್ ಕಾಲೇಜು ಆಗಿ ಮಾನ್ಯತೆ ಪಡೆಯಿತು.

೧೮೮೭ರಲ್ಲಿ ಗಣಿತ, ಭೌತಶಾಸ್ತ್ರ, ರಸಾಯನ ಶಾಸ್ತ್ರ, ಇತಿಹಾಸ, ತರ್ಕಶಾಸ್ತ್ರ, ರಾಜ್ಯಶಾಸ್ತ್ರ ಹಾಗೂ ಅರ್ಥಶಾಸ್ತ್ರಗಳನ್ನು ಐಚ್ಛಿಕ ವಿಷಯಗಳಾಗಿ ಆರಿಸಿಕೊಳ್ಳಬಹುದಾಗಿತ್ತು. ೧೮೮೮ರಲ್ಲಿ ನಾಲ್ಕು ಹುಡುಗರು ಪ್ರಪ್ರಥಮ ಬಾರಿಗೆ ಡಿಗ್ರಿ ಮುಗಿಸಿದ ವಿದ್ಯಾರ್ಥಿಗಳು, ೧೮೮೫ರಲ್ಲಿ ೩೭, ೧೮೯೪ರಲ್ಲಿ ೫೯ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದ ಕಾರಣ ಈದ್ಗಾಬೆಟ್ಟವೆಂದು ಕರೆಯುವ ಎತ್ತರದ ಜಾಗಕ್ಕೆ ೧೮೮೫ ಫೆಬ್ರವರಿ ೧೫ರಂದು ಕೊಡಿಯಾಲ್ ಬೈಲಿನಿಂದ ಕಾಲೇಜು ಸ್ಥಳಾಂತರವಾಯಿತು. ಶಿಕ್ಷಣವೆಂಬ ಸಂಪ್ರದಾಯವು ದಕ್ಷಿಣ ಕನ್ನಡದ ಸಾಂಸ್ಕೃತಿಕ ಸಾಂಪ್ರದಾಯಿಕ ಪರಿಸರಕ್ಕೆ ಹೊಸದಾದುದರಿಂದ ಮಕ್ಕಳನ್ನು ತಂದೆ ತಾಯಿಗಳು ಶಾಲೆಗೆ ಕಳುಹಿಸಲು ಮತ್ತು ಮಕ್ಕಳಿಗೆ ಮನೆ ಬಿಟ್ಟು ಶಾಲೆಗೆ ಬರಲು ಹಿಂಜರಿಕೆ ಇತ್ತು. ಶಿಕ್ಷಣವನ್ನು ಕೊಡುವುದು ಮಾತ್ರವಲ್ಲ ಸಮಾಜಕ್ಕೆ ಶಿಕ್ಷಣದ ರುಚಿಯನ್ನು ತರಬೇಕು ಎಂಬುದು ಮನದಟ್ಟಾಗಿ ಮಕ್ಕಳನ್ನು ಸೆಳೆಯಲು ಹಲವು ತಂತ್ರ ರೂಪಿಸಿದರು. ಪಾಠಗಳೊಂದಿಗೆ ಆಟಗಳನ್ನು ಆರಂಭಿಸುವುದು, ಸಾಹಿತ್ಯ ಸಂಘ, ಪಾಲಕರ ಸಂಘ, ಸಂಗೀತ, ಬ್ಯಾಂಡು, ನಾಟಕ, ರಜಾದಿನದಲ್ಲಿ ಶಿಬಿರಗಳು ಶನಿವಾರದಂದು ಸಿನಿಮಾ, ವಿದ್ಯಾರ್ಥಿಗಳಿಗೆ ಪ್ರವಾಸ, ಪಿಕ್‌ನಿಕ್‌ಗಳನ್ನು ಏರ್ಪಡಿಸುವುದು ಇತ್ಯಾದಿ ಪಠ್ಯೇತರ ಚಟುವಟಿಕೆಗಳನ್ನು ಏರ್ಪಡಿಸಿ ಮಕ್ಕಳನ್ನು ಸೆಳೆಯುವ ಪ್ರಯತ್ನ ಮತ್ತು ಸಮಾಜದಲ್ಲಿ ಶಿಕ್ಷಣದ ಕ್ರಾಂತಿಯನ್ನು ಮಾಡುವ ಕಾರ್ಯವನ್ನು ಕಾಲೇಜು ನಡೆಸಿತು.

ಮುಳಿಯ ತಿಮ್ಮಪ್ಪಯ್ಯ, ಸಂಸ, ಸೇಡಿಯಾಪು ಕೃಷ್ಣಭಟ್ಟ, ತೆಕ್ಕುಂಜೆ ಗೋಪಾಲಕೃಷ್ಣ ಭಟ್, ಪದಕಣ್ಣಾಯ, ಡಾ। ನಾ। ದಾಮೋದರಶೆಟ್ಟಿ ಮುಂತಾದ ವಿದ್ವಾಂಸರು ಇಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸುವ ಮೂಲಕ ಸಮಾಜವನ್ನು ತಿದ್ದುವ ಮತ್ತು ಬದಲಾಯಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರು ಎಂಬುದಾಗಿ ದಾಖಲೆಗಳು ತಿಳಿಸುತ್ತವೆ.

### ೨.೩.೫. ಸಾರಸ್ವತ ಸಂಸ್ಕೃತ ಶಾಲೆ:

ಕೃಷಿಕರೂ ಅಲ್ಲದ ವ್ಯಾಪಾರಿಗಳೂ ಅಲ್ಲದ ಸಾರಸ್ವತ ಸಮುದಾಯದ ಮುಖ್ಯ ಲಕ್ಷಣವೇ ಕಲಿಕೆ. ೧೮೦೧ರ ವೇಳೆಯಲ್ಲಿಯೇ ಬ್ರಿಟಿಷ್ ಆಡಳಿತವು ಶಿಕ್ಷಣ ನೀಡಿದಾಗ ಶಿಕ್ಷಣವನ್ನು ಪಡೆದ ಮೊದಲಿಗರು ಈ ಸಾರಸ್ವತ ಸಮುದಾಯದವರು. ವಿದ್ಯಾವಂತರು ಹಾಗೂ ಮೇಲ್ಜಾತಿ ಅನ್ನುವ ಕಾರಣದಿಂದ ಸರಕಾರದ ಜಿಲ್ಲಾಧಿಕಾರಿಗಳ ಆಡಳಿತ ಕಛೇರಿ, ಪೋಲೀಸ್, ಶಿಕ್ಷಣ, ಕಂದಾಯ, ನ್ಯಾಯಾಲಯ ಮೊದಲಾದ ಇಲಾಖೆಗಳಲ್ಲಿ ಉನ್ನತ ಹುದ್ದೆಗಳಲ್ಲಿದ್ದು ಆಯಾಯ ಊರುಗಳಲ್ಲಿ ಈ ವರ್ಗದ ಜನ ಗಣ್ಯರಾಗಿದ್ದರು. ಅಂತಹ ವಿದ್ಯಾವಂತರಲ್ಲಿ ಕಾಗಲ್ ದೇವಪ್ಪಯ್ಯ, ದಿವಾನ್ ಬಹಾದ್ದೂರ್ ನಯಂಪಳ್ಳಿ ಶಿವರಾವ್, ಕಬಾಡ್ ರಾಮರಾವ್, ಕಲ್ಲೆ ಮಂಜುನಾಥಯ್ಯ, ಸುಬೇರ್ ಮಂಗೇಶ್‌ರಾವ್, ಕಲ್ಯಾಣಪುರ ರಾಘವೇಂದ್ರ ರಾವ್, ಮಂಜೇಶ್ವರ ರಾಮಪ್ಪಯ್ಯ, ಬೆಂದೂರು ಮಂಗೇಶ ರಾವ್, ಉಳ್ಳಾಲ ರಘುನಾಥಯ್ಯ ಇವರು ಆಧುನಿಕ ಶಿಕ್ಷಣದ ಅವಶ್ಯಕತೆಯನ್ನು ಮನಗಂಡು ೧೮೭೦ರಲ್ಲಿ ಸಂಸ್ಕೃತ ಶಾಲೆಯನ್ನು ಮಂಗಳೂರಿನ ಶ್ರೀ ಉಮಾಮಹೇಶ್ವರ ದೇವಸ್ಥಾನದ ಅಂಗಣ ಹಾಗೂ ಆರ್ಯ ಮಂದಿರ ಎಂಬ ಹೆಸರಿನ ಮಹಡಿಯಲ್ಲಿ ಪ್ರಾರಂಭಿಸಿದರು. ನಂತರ ೧೮೭೦ರ ಜೂನ್‌ನಲ್ಲಿ 'ಗಣಪತಿ ಶಾಲೆ' ಎಂಬುದಾಗಿ ಪುನರ್ ನಾಮಕರಣ ಮಾಡಿ ಶಾಲೆಯ ಆಡಳಿತಕ್ಕಾಗಿ ಸಾರಸ್ವತ ಎಜ್ಯುಕೇಶನ್ ಸೊಸೈಟಿ ಎಂದು ಹೆಸರಿಸಿಕೊಂಡರು. ಈ ಶಾಲೆಯಲ್ಲಿ ಜಾತಿ ಮತಧರ್ಮಗಳ ಭೇದವಿಲ್ಲದೆ ದಲಿತರು ಎಂದು ಕರೆಸಿಕೊಳ್ಳುವ ವರ್ಗದವರಿಗೂ ಪ್ರವೇಶಕ್ಕೆ ಅವಕಾಶವಿತ್ತು ಎಂದು ಶಾಲಾ ದಾಖಲೆಗಳಿಂದ ದೃಢೀಕರಿಸಲಾಗುತ್ತದೆ.

೧೮೭೦ ರಿಂದ ೧೯೦೮ರ ವರೆಗಿನ ಗಣಪತಿ ಶಾಲೆಯ ಇತಿಹಾಸವು ಕೇವಲ ಶಿಕ್ಷಣವನ್ನಷ್ಟೇ ನೀಡದೆ ಸಮಾಜದ ಅಭಿವೃದ್ಧಿಯ ಪುರೋಗಾಮಿ ಚಿಂತನೆಗಳಿಗೆ ಸ್ವಾತಂತ್ರ್ಯ ಹೋರಾಟಕ್ಕೆ, ಸಾಮಾಜಿಕ ಸುಧಾರಣೆಗಳಿಗೆ ಸಾಕಷ್ಟು ಕೊಡುಗೆಗಳನ್ನು

ನೀಡಿವೆ. ಆಧುನಿಕ ಚಿಂತನೆಗಳನ್ನು ಮೈಗೂಡಿಸಿಕೊಂಡಿದ್ದ ಈ ಸಮುದಾಯ ೧೮೬೫ರಲ್ಲಿ ಸರಕಾರಿ ಅಭ್ಯಾಸಿ ಶಾಲೆ ಎಂದು ಕರೆಯಲ್ಪಡುವ ಪ್ರೋವಿನ್ಸಿಯಲ್ ಸ್ಕೂಲಿನ ಹುಟ್ಟಿಗೆ ಕಾರಣಕರ್ತರಾಗಿದ್ದವರು ಎಂಬುದನ್ನು ಸ್ಮರಿಸಲಾಗುತ್ತದೆ. ಆರ್ಥಿಕ ಹಿನ್ನಡೆ ಮತ್ತು ಶಿಕ್ಷಣ ಇಲಾಖೆಯ ಹೊಸ ಕಾನೂನಿಂದಾಗಿ ಶಾಲೆಯನ್ನು ಮುಚ್ಚುವ ಪರಿಸ್ಥಿತಿ ಬಂದಾಗ ಕನ್ನಡ ಸಾಹಿತ್ಯದ ಮೊದಲ ಸಾಮಾಜಿಕ ಕಾದಂಬರಿಕಾರ ಗುಲ್ವಾಡಿ ವೆಂಕಟ್ರಾಯರು ಮತ್ತು ಪ್ರೊವಿನ್ಸಿಯಲ್ ಸ್ಕೂಲಿನ ಪ್ರಾಂಶುಪಾಲರಾದ ಪ್ರೊ. ಹೆರ್ಝಿಲ್ ಹರ್ಟ್ ಆತ್ಮವಿಶ್ವಾಸವನ್ನು ತುಂಬಿದ ಕಾರಣದಿಂದಾಗಿ ಶಾಲೆ ಪುನರುಜ್ಜೀವನಗೊಂಡು ಅಭಿವೃದ್ಧಿಯ ಕಡೆಗೆ ಮುಖ ಮಾಡಿ ಶಿಕ್ಷಣ ಇಲಾಖೆಯ ಮೆಚ್ಚುಗೆಗೆ ಪಾತ್ರವಾಗಿ ಸೆಕೆಂಡರಿ ಶಾಲೆಯಾಗಿದ್ದುದು ಹೈಯರ್ ಸೆಕೆಂಡರಿ ಶಾಲೆಯಾಗಲು ಅರ್ಹತೆಯನ್ನು ಪಡೆಯಿತು ಎಂದು ಆ ಕಾಲದಲ್ಲಿ ಶಾಲಾ ಇನ್ಸ್‌ಪೆಕ್ಟರರಾಗಿದ್ದ ಪಿ.ಪಿ. ಬ್ರೈತ್‌ವೈಟ್ ಅವರ ಶಾಲಾ ವರದಿಯಲ್ಲಿ ದಾಖಲಾಗಿದೆ. ಈ ಸಮಯದಲ್ಲಿ ಬಂಟ್ವಾಳ ಮಂಗೇಶ್ ರಾವ್ ಮುಖ್ಯೋಪಾಧ್ಯಾಯರಾಗಿದ್ದು, ಕತ್ರೆ ಲಕ್ಷ್ಮಣರಾವ್, ಕೆ.ಜಿ. ರಾಮಕೃಷ್ಣ ರಾವ್ ಸಹಾಯಕ ಶಿಕ್ಷಕರಾಗಿದ್ದರು. ಉಮಾಮಹೇಶ್ವರ ದೇವಾಲಯದ ಪಕ್ಕದ ನೆರೆಹೊರೆಯ ಶುಚಿತ್ವದ ದೃಷ್ಟಿಯಿಂದ ಸಮರ್ಪಕವಾಗಿಲ್ಲ ಮತ್ತು ಶಾಲೆಯು ಉನ್ನತ ದರ್ಜೆಗೇರಬೇಕಾದ ಸಂದರ್ಭದಲ್ಲಿ ಆರೋಗ್ಯ ಪೂರ್ಣ ಸ್ಥಳಕ್ಕೆ ಶಾಲೆಯನ್ನು ವರ್ಗಾಯಿಸಬೇಕು ಎನ್ನುವ ಆಶಯವನ್ನು ಶಾಲಾ ಇನ್ಸ್‌ಪೆಕ್ಟರ್ ವ್ಯಕ್ತಪಡಿಸಿದರಿಂದು ೧೯೧೦ರಲ್ಲಿ ಧಾರೇಶ್ವರ ಸದಾಶಿವರಾಯರ ಮನೆ ಮತ್ತು ತೋಟವನ್ನು ದಾನ ನೀಡಿದರು. ಅಲ್ಲಿ ಶಾಲಾ ಕಟ್ಟಡ ನಿರ್ಮಿಸಲಾಯಿತು. ಅದಕ್ಕೆ 'ಶಾರದಾ ಸದನ' ಎಂಬ ನಾಮಕರಣ ಮಾಡಿ ೧೯೧೫ರ ಜನವರಿಯಲ್ಲಿ ವಿದ್ಯಾರ್ಥಿಗಳು ಹೊಸ ಕಟ್ಟಡಕ್ಕೆ ಪ್ರವೇಶಿಸುತ್ತಾರೆ. ಕಟ್ಟಡ ನಿರ್ಮಾಣಕ್ಕೆ ಶ್ರಮಿಸಿದವರಲ್ಲಿ ಮಹಿಳಾ ಸಭಾದ ಸದಸ್ಯೆಯರಾದ ಕತ್ರೆ ಲೀಲಾಬಾಯಿ, ಮುಂಡ್ಕೂರು ಅಂಬಾಬಾಯಿ, ಕವಳಿಗೆ ಭವಾನಿಬಾಯಿ, ಹೀರಾಬಾಯಿ ಮೊದಲಾದವರು ಇವರೊಂದಿಗೆ ಹವ್ಯಾಸಿ ನಾಟಕ ಬಳಗದ ಕೋಡಿಕಲ್ ಕೃಷ್ಣರಾವ್, ಕಲ್ಯಾಣಪುರ ಮಂಗೇಶ ರಾವ್, ಹರಿದಾಸ ಗುಲ್ವಾಡಿ ಶಿವಾನಂದ ಭಟ್ ಮತ್ತು ಶಾಣೆ ಆನಂದ ಭಟ್ ಮುಂತಾದವರ ಇವರುಗಳೆಲ್ಲರ ಒಗ್ಗಟ್ಟಿನಿಂದ ಸಂಸ್ಥೆ ಪ್ರಗತಿಯತ್ತ ಸಾಧಿಸಿತು ಎಂದು ದಾಖಲೆಗಳು ಹೇಳುತ್ತವೆ.

೧೯೩೦ರ ವೇಳೆಗೆ ೬೦ ವರ್ಷದ ವಜ್ರಮಹೋತ್ಸವವನ್ನು ಆಚರಿಸಿತು. "ಈ ಸಂಸ್ಥೆಯಲ್ಲಿ ವಿದ್ಯಾರ್ಜನೆ ಮಾಡಿದ ವಿದ್ಯಾರ್ಥಿಗಳಲ್ಲಿ ಕುದ್ಮಲ್ ರಂಗರಾಯರಂತಹ ಸಮಾಜ ಸುಧಾರಕರು, ಕಾರ್ನಾಡ್ ಸದಾಶಿವರಾಯರಂತಹ ಸ್ವಾತಂತ್ರ್ಯ ಹೋರಾಟಗಾರರು, ಬೆನಗಲ್ ನರಸಿಂಹರಾಯರಂತಹ ಸಂವಿಧಾನ ಕರಡುಪ್ರತಿ ಸಮಿತಿಯ ಸದಸ್ಯ, ಮಂಗಳೂರು ಸಾಂಸ್ಕೃತಿಕ ಮತ್ತು ಕ್ರೀಡಾ ಲೋಕದಲ್ಲಿ ಅಪೂರ್ವ ವ್ಯಕ್ತಿಯಾಗಿದ್ದ ಜರ್ಮನಿಯ ನಿವಾಸಿಯಾಗಿದ್ದ ಅಂತಾರಾಷ್ಟ್ರೀಯ ಖ್ಯಾತಿಯ ಛಾಯಾಚಿತ್ರ ಗ್ರಾಹಕ ಜೈ ಉಳ್ಳಾಲ್, ಫ್ರಾನ್ಸ್‌ನ ಯುನೆಸ್ಕೋ ಸಂಸ್ಥೆಯಲ್ಲಿ ಉನ್ನತ ಹುದ್ದೆಯಲ್ಲಿರುವ ವಿಶ್ವನಾಥ ಗೊಲ್ಲರಕೇರಿ, ಅಮೆರಿಕಾದ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿರುವ ಡಾ। ದೇವದಾಸ್ ಶೆಟ್ಟಿ, ಪ್ರೊ. ವಿನಾಯಕ ಕುಡ್ವ, ಡಾ। ಬಿ.ಎಸ್. ಸೋಮಯಾಜಿ, ಇಂಗ್ಲೆಂಡಿನಲ್ಲಿರುವ ಜಾಗತಿಕ ಬ್ಯಾಂಕೊಂದರ ಉನ್ನತ ಅಧಿಕಾರಿಯಾಗಿರುವ ಭವಾನಿಶಂಕರ ಕಂಡ್ಲೂರು, ನಾಟಕ ರಂಗದ ಪ್ರಸಿದ್ಧರಾದ ಎಂ. ಸೀತಾರಾಮ ಕುಲಾಲ್ ಸುರೇಶ್ ಶೆಟ್ಟಿ, ದೇವದಾಸ್ ಕಾಪಿಕಾಡ್, ವಿಜಯ ಕುಮಾರ್ ಕೊಡಿಯಾಲ್‌ಬೈಲ್ ಹೀಗೆ ಹಲವಾರು ವಿದ್ಯಾರ್ಥಿಗಳು ಉನ್ನತ ಸ್ಥಾನಕ್ಕೇರಿದ್ದಾರೆ." ೧೮

## ೨.೩.೬. ಕೆನರಾ ಶಿಕ್ಷಣ ಸಂಸ್ಥೆಗಳು:

ಇಂದು ವಟವೃಕ್ಷವಾಗಿ ಬೆಳೆದಿರುವ ಕೆನರಾ ವಿದ್ಯಾಸಂಸ್ಥೆ ಸ್ಥಾಪನೆಗೊಂಡದ್ದು ಕ್ರಿ.ಶ. ೧೮೯೧ರ ಜೂನ್ ೨೦ರಂದು. ಈ ವಿದ್ಯಾಸಂಸ್ಥೆಯ ಸ್ಥಾಪಕರು ಅಮ್ಮೆಂಬಳ ಸುಬ್ಬರಾಯ ಪೈ. ಒಂದು ವಿದ್ಯಾಸಂಸ್ಥೆ ಯಶಸ್ವಿಯಾಗಿ

ಮುನ್ನಡೆಯಬೇಕಾದರೆ ಆರ್ಥಿಕವಾಗಿಯೂ ಸದೃಢಗೊಂಡಿದ್ದರೆ ಮಾತ್ರ ಸಾಧ್ಯ ಎಂಬುದನ್ನು ಮನಗಂಡಿದ್ದ ಸುಬ್ಬರಾಯರು ಇಂದು ಭಾರತದ ಹೆಸರಾಂತ ಬ್ಯಾಂಕ್ ಆಗಿರುವ 'ಕೆನರಾ ಬ್ಯಾಂಕ್' ಅನ್ನೂ ಸ್ಥಾಪಿಸಿದರು. ಕೆನರಾ ವಿದ್ಯಾಸಂಸ್ಥೆ ಜನ್ಮ ತಾಳಲು ಅಮ್ಮೆಂಬಳ ಸುಬ್ಬರಾಯರ ಹಾಗೆ ಐವರು ತರುಣ ಅಧ್ಯಾಪಕರು ಕಾರಣಕರ್ತರಾಗಿದ್ದಾರೆ. ಈ ಐವರ ಕನಸೇ ಕೆನರಾ ವಿದ್ಯಾಸಂಸ್ಥೆಯಾಗಿತ್ತು. ಈ ಕನಸನ್ನು ಅ. ಸುಬ್ಬರಾಯ ಪೈಯವರನ್ನು ಭೇಟಿ ಮಾಡಿ ಬಿನ್ನವಿಸಿಕೊಂಡರು. ಆ ವೇಳೆಗೆ ಚೆನ್ನೈನಲ್ಲಿ ವಕೀಲರಾಗಿದ್ದ ಪೈಯವರು ಮಂಗಳೂರಿಗೆ ಬಂದು ಅವರೊಡನೆ ಸಮಾಲೋಚಿಸಿ ಕೆನರಾ ವಿದ್ಯಾಸಂಸ್ಥೆ ಹುಟ್ಟುಹಾಕಲು ಕಾರಣೀಭೂತರಾದರು.

ಕೆನರಾ ವಿದ್ಯಾಸಂಸ್ಥೆ ಹುಟ್ಟು ಹಾಕಲು ಕಾರಣರಾದ ಐವರು ಅಧ್ಯಾಪಕರುಗಳೆಂದರೆ–

- ಎ. ವಾಸುದೇವ ರಾವ್, ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಿಂದ ಭೌತಶಾಸ್ತ್ರ ಪದವೀಧರ ಕ್ಯಾಲಿಕಟ್‌ನಲ್ಲಿ ಅಧ್ಯಾಪಕರಾಗಿದ್ದರು.
- ಬಿ. ಪದ್ಮನಾಭ ಬಾಳಿಗ, ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಿಂದ ರಾಸಾಯನಶಾಸ್ತ್ರ ಪದವೀಧರ
- ಎ. ಪದ್ಮನಾಭಯ್ಯ, ಇವರು ಖ್ಯಾತ ಆಂಗ್ಲಭಾಷಾ ಅಧ್ಯಾಪಕರು, ಮಂಗಳೂರಿನ ಮುನಿಸಿಪಲ್ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರು.
- ಬಿ. ವಾಮನಬಾಳಿಗ, ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಿಂದ ಜೀವಶಾಸ್ತ್ರ ಪದವೀಧರ
- ಯು. ಶ್ರೀನಿವಾಸರಾವ್ ಅಧ್ಯಾಪಕರು.

ಈ ಐವರು ಮಹನೀಯರು ಕೆನರಾ ಶಾಲೆಯ ಸ್ಥಾಪನೆಯ ಏಕೈಕ ಉದ್ದೇಶದಿಂದ ತಮ್ಮ ತಮ್ಮ ಸ್ವಂತ/ಸರಕಾರಿ ಹುದ್ದೆಗಳನ್ನು ತ್ಯಜಿಸಿ ಸುಬ್ಬರಾಯ ಪೈಗಳೊಂದಿಗೆ ಕೈ ಜೋಡಿಸಿ ಕೆನರಾ ಶಾಲೆಯ ಉದಯಕ್ಕೆ ಕಾರಣರಾದರು.

ಗೌಡ ಸಾರಸ್ವತ ಬ್ರಾಹ್ಮಣ ಸಮುದಾಯದ ಶಾಲೆಯಾದರೂ ಸಮಾಜದ ಎಲ್ಲ ವರ್ಗಗಳ ಅಂದರೆ ಹಿಂದು, ಮುಸ್ಲಿಮ್, ಕ್ರೈಸ್ತ, ಹಿಂದುಳಿದ ವರ್ಗದ ಎಲ್ಲಾ ವಿದ್ಯಾರ್ಥಿಗಳಿಗೆ ಹಿತ–ಮಿತ ವೆಚ್ಚದಲ್ಲಿ ಅತ್ಯುತ್ತಮ ವಿದ್ಯಾಭ್ಯಾಸ ಕೊಡುವುದರಲ್ಲಿ ಸಂಸ್ಥೆಯು ಶ್ರಮಿಸಿದೆ. ಕ್ರಿ.ಶ. ೧೮೯೧ರ ಕಾಲಘಟ್ಟದಲ್ಲಿ ಕೆನರಾ ಹೆಮ್ಮಕ್ಕಳ ಶಾಲೆಯನ್ನು ಸ್ಥಾಪಿಸುತ್ತಾರೆ. "ಆ ಕಾಲದಲ್ಲಿ ಹೆಣ್ಣುಮಕ್ಕಳು ಮನೆಯಿಂದ ಹೊರಗೆ ಕಾಲಿಡುವುದೇ ದುಸ್ತರವಾಗಿತ್ತು. ಅವರ ವಿದ್ಯಾಭ್ಯಾಸ ಅಗತ್ಯ ಎಂದು ಸುಬ್ಬರಾಯ ಪೈಗಳಿಗೆ ಅನಿಸಿದ್ದರಿಂದಲೇ ೧೮೯೧ರಲ್ಲಿ ಸ್ತ್ರೀ ಶಿಕ್ಷಣಕ್ಕೆಂದೇ ಕೆನರಾ ಹೆಮ್ಮಕ್ಕಳ ಶಾಲೆ ಪ್ರಾರಂಭಿಸಿದರು. ಅತೀ ಕಡಿಮೆ ವೇತನವಿದ್ದು ಕೆನರಾ ಶಾಲೆ ನಡೆಸುತ್ತಿರುವಾಗ ಹೆಮ್ಮಕ್ಕಳ ಶಾಲೆಗೆ ಸಂಪನ್ಮೂಲಗಳನ್ನು ಕ್ರೋಢೀಕರಿಸುವುದಕ್ಕಾಗಿ ಪೈಯವರು ವಿನೂತನ ಯೋಜನೆ ರೂಪಿಸುತ್ತಾರೆ. ಅದುವೇ 'ಮುಷ್ಟಿ ಫಂಡ್' ಮನೆಯಿಂದ–ತಾಯಂದಿರು ಒಂದು ಮುಷ್ಟಿ ಅಕ್ಕಿಯನ್ನು ದಾನವಾಗಿ ಶಾಲಾ ನಿರ್ವಹಣೆಗೆ ಸಂತೋಷದಿಂದ ಕೊಡುತ್ತಿದ್ದರು. ಆ ಮೂಲಕ ಆರಂಭಿಕ ಬಂಡವಾಳವಾಗಿ ಶಾಲೆ ನಡೆಸಲು ಸಹಕಾರಿಯಾದುದು ಇತಿಹಾಸದ ಪುಟಗಳಲ್ಲಿ ದಾಖಲೆಯಾಗಿದೆ".[೧೮] ಹೀಗೆ ಮುಷ್ಟಿ ಫಂಡ್‌ನ ರೂಪದ ಕಾಮಧೇನು ಬಾಲಕಿಯರ ಶಿಕ್ಷಣಕ್ಕೆ ಸಹಕಾರಿಯಾಗಿದೆ ಇಂದು ಕೆನರಾ ಹೆಮ್ಮಕ್ಕಳ ಪ್ರೌಢಶಾಲೆ ೧೨೩ ವರ್ಷಗಳಾಗುತ್ತಾ ಬಂದಿರುವುದು ಸಂಸ್ಥೆಯ ಹೆಮ್ಮೆಯಾಗಿದೆ.

### ೨.೩.೭. ಅಪಸ್ತೋಲಿಕ್ ಕಾರ್ಮೆಲ್ ಸಂಸ್ಥೆ:

ಅಪಸ್ತೋಲಿಕ್ ಕಾರ್ಮೆಲ್ ಸಂಸ್ಥೆ ಮಹಿಳಾ ಶಿಕ್ಷಣಕ್ಕಾಗಿ ಪಣತೊಟ್ಟು ಸೇವೆ ಸಲ್ಲಿಸುವ ಧ್ಯೇಯವನ್ನುಳ್ಳ ಕ್ರೈಸ್ತಧರ್ಮಕ್ಕೆ ಸೇರಿದ ಸನ್ಯಾಸಿನಿಯರ ಸಂಸ್ಥೆಯಾಗಿದೆ. ಅಪಸ್ತೋಲಿಕ್ ಸಂಸ್ಥೆ ಪ್ರಾರಂಭವಾದುದು ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಮದರ್ ವರೊನಿಕಾ ಎಂಬುವವರಿಂದ ದಕ್ಷಿಣ ಭಾರತದ ಹೆಂಗಳೆಯರಿಗೆ ಮತ್ತು ಮಹಿಳೆಯರಿಗೆ ಶಿಕ್ಷಣ ಕೊಡಬೇಕು ಎಂಬ ಉದ್ದೇಶದಿಂದಲೇ ಸಂಸ್ಥೆಯನ್ನು ಸ್ಥಾಪಿಸಿದರು. ಸಿಸ್ಟರ್ ವರೊನಿಕಾ ಫ್ರಾನ್ಸಿಗೆ ಧಾರ್ಮಿಕ ಸನ್ಯಾಸಿನಿಯರು ಪಡೆಯಬೇಕಾದ ತರಬೇತಿಗೆ ತೆರಳಿದರೂ ಭಾರತದಲ್ಲಿ ಕಾರ್ಯಗತಗೊಳಿಸಬೇಕಾದ ಧ್ಯೇಯ ಸಾಧನೆಗಾಗಿ ಬೇರೆ ಬೇರೆ ದೇಶದ ಯುವ ಯುರೋಪಿಯನ್ ಮಹಿಳೆಯರ ಗುಂಪನ್ನು ತರಬೇತುಗೊಳಿಸಿದರು. ಈ ಸಂಸ್ಥೆ ಮಂಗಳೂರಿನಗೆ ಬಂದ ಹತ್ತು ಹದಿನೈದು ದಶಕಗಳಲ್ಲಿ ಹಲವಾರು ಸಂಸ್ಥೆಗಳನ್ನು ಸ್ಥಾಪಿಸಿತು.

ಅವುಗಳು ಸೈಂಟ್ ಆನ್ಸ್ ಸ್ಕೂಲ್ (೧೮೭೦), ಸೈಂಟ್ ಆನ್ಸ್ ಟ್ರೈನಿಂಗ್ ಸ್ಕೂಲ್ (೧೮೯೦), ಸೈಂಟ್ ಮೇರಿಸ್ ಸ್ಕೂಲ್ (೧೯೦೫), ಸೈಂಟ್ ಆಗ್ನೆಸ್ ಸೆಕೆಂಡರಿ ಸ್ಕೂಲ್ (೧೯೧೪), ಸೈಂಟ್ ಆಗ್ನೆಸ್ ಕಾಲೇಜು (೧೯೨೧), ಲೇಡಿಹಿಲ್ ವಿಕ್ಟೋರಿಯಾ ಗರ್ಲ್ಸ್ ಹೈಸ್ಕೂಲ್ (೧೯೨೧), ಸ್ಟೆಲ್ಲಾ ಮಾರಿಸ್ ಸ್ಕೂಲ್, ಕೋಟೆಕಾರ್ (೧೯೩೭), ಸೈಂಟ್ ಆನ್ಸ್ ಕಾಲೇಜು (೧೯೪೩), ಕಾರ್ಮೆಲ್ ಇಂಗ್ಲೀಷ್ ಸ್ಕೂಲ್ (೧೯೫೧), ಇನ್‌ಫಂಟ್ ಜೀಸಸ್ ಹೈಯರ್ ಪ್ರೈಮರಿ ಸ್ಕೂಲ್ (೧೯೭೪), ಸೈಂಟ್ ಆಗ್ನೆಸ್ ಸ್ಪೆಶಲ್ ಸ್ಕೂಲ್ (೧೯೭೧), ವಿದ್ಯಾಜ್ಯೋತಿ ಹೈಯರ್ ಪ್ರೈಮರಿ ಸ್ಕೂಲ್ (೧೯೮೮) ಮತ್ತು ಮೌಂಟ್ ಕಾರ್ಮೆಲ್ ಸೆಂಟ್ರಲ್ ಸ್ಕೂಲ್ (೨೦೦೮), ಇದಲ್ಲದೆ ೧೯೯೬ರಲ್ಲಿ ಸೈಂಟ್ ಆನ್ಸ್ ಶಾಲೆಯಲ್ಲಿ ನ್ಯಾಷನಲ್ ಓಪನ್ ಸ್ಕೂಲ್‌ನ ಅಧ್ಯಯನ ಕೇಂದ್ರವೂ ಪ್ರಾರಂಭವಾಗಿದೆ. ಎಲ್ಲವೂ ಶಿಕ್ಷಣದ ಗುಣಮಟ್ಟಕ್ಕೆ ಹೆಸರಾಗಿ ನಿರಂತರ ಪ್ರಗತಿ ಹೊಂದುತ್ತಿವೆ.

ಸೈಂಟ್ ಆನ್ಸ್ ಹೈಸ್ಕೂಲ್ (೧೮೭೦) ಅಪಸ್ತೋಲಿಕ್ ಸಂಸ್ಥೆಯ ಚೊಚ್ಚಲ ಸಂಸ್ಥೆ ಮಂಗಳೂರಿನ ಬಾಲಿಕೆಯರಿಗೆ ಅನನ್ಯವಾದ ರೀತಿಯಲ್ಲಿ ಶಿಕ್ಷಣದ ಅವಕಾಶವನ್ನು ತೆರೆದಿಟ್ಟ ಸಂಸ್ಥೆಯಾಗಿದೆ. ಕೇವಲ ಶಿಕ್ಷಣ ಸಂಸ್ಥೆಯಾಗಿರಲಿಲ್ಲ ಇದಕ್ಕೆ ಹೊಂದಿಕೊಂಡಂತೆ ಒಂದು ಆಸ್ಪತ್ರೆ ಕೊಠಡಿ ಹಾಗೂ ಒಂದು ಅನಾಥ ಮಕ್ಕಳ ಮನೆಯೂ ಇತ್ತು. ಬಾಲಕಿಯರ ಸರ್ವಾಂಗೀಣ ಪ್ರಗತಿ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಾಗಿಯೂ ಪ್ರಗತಿಯನ್ನು ಸಾಧಿಸುವುದೇ ಶಾಲೆಯ ಉದ್ದೇಶವಾಗಿತ್ತು. ವಿದ್ಯಾರ್ಥಿಗಳಲ್ಲಿ ವೈಜ್ಞಾನಿಕ ಮನೋಭಾವ, ಪೌರಪ್ರಜ್ಞೆ ಬೆಳೆಸುವಲ್ಲಿ, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿಯೂ ಕ್ರೀಡಾಪಟುಗಳನ್ನಾಗಿ ಮಾಡಿದ ಕೀರ್ತಿ ಈ ಸಂಸ್ಥೆಗೆ ಸಲ್ಲುತ್ತದೆ.

### ಸೈಂಟ್ ಆನ್ಸ್ ಟೀಚರ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ – ೧೮೯೦:

ಈ ಟೀಚರ್ ಟ್ರೈನಿಂಗ್ ಸ್ಕೂಲ್‌ನ ಸ್ಥಾಪನೆಯ ಪೂರ್ವಭಾವಿ ಸಿದ್ಧತೆಗಾಗಿ ಅಪಸ್ತೋಲಿಕ್ ಕಾರ್ಮೆಲ್ ಸಂಸ್ಥೆಯ ಮುಂದಾಳಾಗಿದ್ದ ಮದರ್ ಮಾರಿ ದೆಸ್ ಆಂಜ್ ಅವರು ಅಧ್ಯಾಪಕರಾಗಿದ್ದ ಸಿಸ್ಟರ್ ಅಲೋಶಿಯ, ಸಿಸ್ಟರ್ ಬೀಟ್ರಸ್ ಮತ್ತು ಸಿಸ್ಟರ್ ಬರ್ನಾಡ್ ಅವರುಗಳನ್ನು ಮದ್ರಾಸಿನ ಪ್ರೆಸಿಡೆನ್ಸಿ ಮುಖ್ಯೋಪಾಧ್ಯಾಯ ತರಬೇತಿ ಶಾಲೆಗೆ ಕಳುಹಿಸಿದರು. ಆದರೆ ಇವರು ಅಲ್ಲಿಗೆ ಸೇರುವಾಗ ಅರ್ಧ ವರ್ಷದ ಶಿಕ್ಷಣ ಮುಗಿದಿತ್ತಾದರೂ ಫಲಿತಾಂಶ ಬಂದಾಗ ಮೂವರೂ ಮೊದಲನೇ ದರ್ಜೆಯಲ್ಲಿ ತೇರ್ಗಡೆಯಾದರು. ಸಿಸ್ಟರ್ ಅಲೋಶಿಯ ಪ್ರೆಸಿಡೆನ್ಸಿ ಸಂಸ್ಥೆಯ ವಿದ್ಯಾರ್ಥಿಗಳಲ್ಲಿ ಅತಿ ಹೆಚ್ಚು ಅಂಕಗಳಿಸಿದರು. ಈ ಹಿನ್ನೆಲೆಯಲ್ಲಿ ೧೮೯೦ರಲ್ಲಿ ಸೇಂಟ್ ಆನ್ಸ್ ಟೀಚರ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಸ್ಥಾಪಿಸಲಾಯಿತು. ಸಿಸ್ಟರ್ ಅಲೋಶಿಯ ತರಬೇತಿ ಉಪನ್ಯಾಸಕಿಯಾದರು. ಏಳು ವಿದ್ಯಾರ್ಥಿನಿಯರೊಂದಿಗೆ ತರಗತಿ ಪ್ರಾರಂಭವಾಯಿತು.

ಅಪಸ್ತೋಲಿಕ್ ಕಾರ್ಮೆಲ್ ಸಂಸ್ಥೆ ಮಹಿಳಾ ಸಬಲೀಕರಣವನ್ನು ಕುರಿತಂತೆ ಇಟ್ಟುಕೊಂಡಿದ್ದ ಮುನ್ನೋಟಕ್ಕೆ ಸೇಂಟ್ ಆನ್ಸ್ ತರಬೇತಿ ಸಂಸ್ಥೆ ಪ್ರತ್ಯಕ್ಷ ಸಾಕ್ಷಿಯಾಯಿತು. ಇಲ್ಲಿ ಶಿಕ್ಷಿತರಾದ ಎಲ್ಲ ಮಹಿಳೆಯನ್ನೂ, ಶಿಕ್ಷಕಿಯರಾಗಲೂ, ನಿರ್ದಿಷ್ಟ ವೃತ್ತಿಗಾಗಿ ಸಿದ್ಧಗೊಳಿಸುವಾಗ ಇದೊಂದು ಪವಿತ್ರ ವೃತ್ತಿ ಎಂಬುದನ್ನು ಮದರ್ ಅಲೋಶಿಯಾ ವಿದ್ಯಾರ್ಥಿನಿಯರ ಮನಮುಟ್ಟುವಂತೆ ಮೂಡಿಸಿದರು. ಸಬಲೀಕರಣ ಧಾರ್ಮಿಕ ಸಂಸ್ಥೆಯಿಂದಲೇ ಪ್ರಾರಂಭವಾಯಿತು. ಸೇಂಟ್ ಆನ್ಸ್ ಸಂಸ್ಥೆಗೆ ಅನುದಾನವನ್ನು ಅನುಮೋದನೆ ಮಾಡಿದ ಇನ್ಸ್‌ಪೆಕ್ಟರ್ ಅವರು ಈ ವಿಷಯವನ್ನು ತಮ್ಮ ವರದಿಯಲ್ಲಿ ಸ್ಪಷ್ಟ ಮಾಡಿದ್ದಾರೆ. "ಭಾರತೀಯ ಮಹಿಳೆಯರ ಪೂರ್ವಗ್ರಹ ಮತ್ತು ಸಂಪ್ರದಾಯದ ಸಂಕೋಲೆಗಳನ್ನು ಮುರಿದ ದಕ್ಷಿಣ ಭಾರತದ ಮೊದಲ ಧಾರ್ಮಿಕ ಮಹಿಳೆಯರು. ವೇತನ ಅನುದಾನಕ್ಕೆ ಸಂಬಂಧಿಸಿದ ಎಲ್ಲ ಪರೀಕ್ಷೆಗಳಲ್ಲಿ ಇವರು ಯಶಸ್ವಿಯಾಗಿ ತೇರ್ಗಡೆ ಹೊಂದಿದ್ದಾರೆ."[೨೦] ವಿದ್ಯಾರ್ಥಿನಿಯರಿಗೆ ಶಿಕ್ಷಣ ನೀಡುವಾಗ ಮದರ್ ಅಲೋಶಿಯಾ ಅವರಿಗೆ ಎರಡು ಉದ್ದೇಶಗಳಿದ್ದವು ಒಂದು ವ್ಯಕ್ತಿಯಾಗಿ ವಿದ್ಯಾರ್ಥಿನಿಯರನ್ನು ಬೆಳೆಸಿ ಅವರ ವ್ಯಕ್ತಿತ್ವವನ್ನು ಉತ್ತಮಪಡಿಸುವುದು ಮತ್ತು ಅಧ್ಯಾಪಕಿಯರಾಗಿ ಉತ್ತಮ ಸಾಮರ್ಥ್ಯಗಳನ್ನು ಮತ್ತು ಕೌಶಲಗಳನ್ನು ಬೆಳೆಸುವುದು. ಅವರ ಪ್ರಕಾರ ವಿದ್ಯಾರ್ಥಿನಿಯರನ್ನು ತತ್ವನಿಷ್ಠ ಅಧ್ಯಾಪಕರನ್ನಾಗಿ ಮಾಡುವುದೇ ಸಬಲಿಕರಣವಾಗಿತ್ತು. ಈ ರೀತಿ ಬೆಳೆದ ಸಂಸ್ಥೆಗೆ ಭಾರತದ ಎಲ್ಲೆಡೆಗಳಿಂದ ಪ್ರವೇಶಕ್ಕೆ ಬೇಡಿಕೆ ಬರಲು ಪ್ರಾರಂಭವಾಯಿತು.

**ಸೇಂಟ್ ಮೇರಿಸ್ ಸ್ಕೂಲ್ ಮಂಗಳೂರು-೧೯೦೫:**

ಅಪಸ್ತೋಲಿಕ್ ಕಾರ್ಮೆಲ್ ಸಂಸ್ಥೆಯ ಸದಸ್ಯರು ಅವರ ಶಾಲೆಗಳಲ್ಲಿ ನೀಡುತ್ತಿದ್ದ ಶಿಕ್ಷಣ ತಮ್ಮ ಮಕ್ಕಳಿಗೂ ಸಿಗಬೇಕೆಂದು ಮಿಲಾಗ್ರಿಸ್ ಪ್ಯಾರಿಶ್‌ನ ಜನರು ಬಯಸಿದ ಹಿನ್ನಲೆಯಲ್ಲಿ ಹಂಪನಕಟ್ಟೆಯಲ್ಲಿ ಪ್ರಾಥಮಿಕ ಶಾಲೆಯನ್ನು ತೆರೆಯಲಾಯಿತು. ಇಲ್ಲಿ ೪೨ ವಿದ್ಯಾರ್ಥಿನಿಯರಿದ್ದರು.

**ಸೇಂಟ್ ಆಗ್ನೆಸ್ ಸೆಕೆಂಡರಿ ಸ್ಕೂಲ್ (೧೯೧೪):**

ಕ್ರಿ.ಶ. ೧೯೧೪ರಲ್ಲಿ ಆಗ್ನೆಸ್ ಕಾನ್ವೆಂಟ್ ಪ್ರಾರಂಭವಾಯಿತು. ಕದ್ರಿ ಮತ್ತು ಕಂಕನಾಡಿ ಬಡಾವಣೆಗಳ ಹೆಮ್ಮಕ್ಕಳಿಗೆ ಶಿಕ್ಷಣ ನೀಡುವುದು ಇದರ ಉದ್ದೇಶವಾಗಿತ್ತು. ಆ ಕಾಲಕ್ಕೆ ಬೋಳಾರದಲ್ಲಿ ಮದರ್ ವೆರೋನಿಕಾ ಅವರಿಂದ ಸ್ಥಾಪಿತವಾದ ಅಪಸ್ತೋಲಿಕ್ ಕಾರ್ಮೆಲ್ ಸದಸ್ಯೆಯರ ಸೇಂಟ್ ಆನ್ಸ್ ಶಾಲೆ, ಫಳ್ನೀರ್‌ನ ಸೇಂಟ್ ಮೇರಿಸ್ ಶಾಲೆ, ಡೊಂಗರಕೇರಿಯಲ್ಲಿದ್ದ ವಿಕ್ಟೋರಿಯಾ ಕಾಸ್ಟ್ ಶಾಲೆ. ಈ ಮೂರು ಇಂಗ್ಲೀಷ್ ಮಾಧ್ಯಮ ಶಾಲೆಗಳು ಮಾತ್ರ ಹೆಂಗಳೆಯರ ಶಿಕ್ಷಣಕ್ಕಾಗಿ ಅಸ್ತಿತ್ವದಲ್ಲಿದ್ದವು. ಫೆಬ್ರವರಿ ೮, ೧೯೧೪ ಅಪಸ್ತೋಲಿಕ್ ಕಾರ್ಮೆಲ್‌ನ ಇತಿಹಾಸದಲ್ಲಿ ಅವಿಸ್ಮರಣೀಯ ದಿನ. ಮಂಗಳೂರಿನ ಧರ್ಮಗುರುಗಳಾಗಿದ್ದ ಡಾ। ಪೌರಿನಿ ಈ ಸ್ಥಳವನ್ನು ಪೂಜಿಸಿ ಸೇಂಟ್ ಆಗ್ನೆಸ್ ಕಾನ್ವೆಂಟ್‌ಗೆ ಅಡಿಪಾಯ ಹಾಕಿದರು. ಇಲ್ಲಿ ೮೦ ಮಕ್ಕಳಿದ್ದರು. ಒಂದು ವಾರದ ನಂತರ ೪೬ ಮಕ್ಕಳೊಂದಿಗೆ ಬಡ ಮಕ್ಕಳಿಗಾಗಿ ಒಂದು ಪ್ರಾಥಮಿಕ ಶಾಲೆಯನ್ನು ತೆರೆಯಲಾಯಿತು. ಶಾಲೆಯಲ್ಲಿ ಇಂಗ್ಲೀಷ್ ಶಿಕ್ಷಣ ಪಡೆಯ ಬಯಸುವ ಹೆಂಗಳೆಯರು ಉಡುಪಿ, ಕಲ್ಯಾಣಪುರ, ಕುಂದಾಪುರ, ಕಾರ್ಕಳ, ಮೂಲ್ಕಿ, ಕಿನ್ನಿಗೋಳಿ, ಬೆಳ್ತಂಗಡಿ ಹಾಗೂ ಡಯಾಸಿಸ್‌ನ ಎಲ್ಲಾ ಪ್ಯಾರಿಶ್‌ಗಳಿಂದ ಗುಂಪು ಗುಂಪಾಗಿ ಶಾಲೆಗ ಬರುತ್ತಿದ್ದರು.

"ಸೇಂಟ್ ಆಗ್ನೆಸ್ ಶಾಲೆಯಲ್ಲಿ ನೀಡಿದ ತರಬೇತಿಯು ಧೈರ್ಯ, ಆತ್ಮವಿಶ್ವಾಸದಿಂದ ಕೂಡಿದ ಅತ್ಯುತ್ತಮ ಚಾರಿತ್ರ್ಯದ ವಿದ್ಯಾರ್ಥಿನಿಯರನ್ನು ಸಮಾಜಕ್ಕೆ ನೀಡಿತ್ತು. ವಿದ್ಯಾರ್ಥಿನಿಯರನ್ನು ಜೀವನ ಪರೀಕ್ಷೆಗೆ ತಯಾರು ಮಾಡುವುದು. ಶೈಕ್ಷಣಿಕ ಪರೀಕ್ಷೆಗೆ ತಯಾರು ಮಾಡುವುದಕ್ಕಿಂತಲೂ ಹೆಚ್ಚು ಪ್ರಮುಖವಾದುದು ಎಂದು ನಂಬಲಾಗಿತ್ತು. ಸುಲಭದ ಮಿಥ್ಯಕ್ಕಿಂತಲೂ ಕಠಿಣವಾದ ಸತ್ಯಕ್ಕಾಗಿ ನಿಲ್ಲುವ ಧ್ಯೇಯವನ್ನು ಶಾಲೆ ಎತ್ತಿ ಹಿಡಿಯಿತು. ದ ಲಿಟರರಿ ಅಂಡ್ ಡಿಬೇಟಿಂಗ್

ಸೊಸೈಟಿ, ಇತಿಹಾಸ, ಭೂಗೋಳ ಮತ್ತು ವಿಜ್ಞಾನ ಸಂಘಗಳು ಮಕ್ಕಳ ವಿರಾಮಕಾಲವನ್ನು ಸದುಪಯೋಗಪಡಿಸಿಕೊಳ್ಳುವ ತಾಣಗಳಾಗಿದ್ದವು. ಸಂತರ ಜೀವನ, ಆಸಕ್ತಿಯುತ ವೈಜ್ಞಾನಿಕ ಮತ್ತು ವರ್ತಮಾನ ವಿಷಯಗಳು ಯುವ ಮನಸ್ಸಿನ ಉತ್ಸಾಹ ಮತ್ತು ಆಶಯಗಳನ್ನು ಪ್ರದರ್ಶಿಸಲು ಅವಕಾಶಗಳನ್ನೊದಗಿಸಿದವು. ಶಾಲೆಯಲ್ಲಿ ಅಸ್ತಿತ್ವದಲ್ಲಿದ್ದ ಸ್ವ-ಸಹಕಾರ ವ್ಯವಸ್ಥೆ ಮಕ್ಕಳಲ್ಲಿ ಜವಾಬ್ದಾರಿ ಮತ್ತು ನಾಯಕತ್ವವನ್ನು ಹೆಚ್ಚಿಸಿದವು."೨೧

**ಸೇಂಟ್ ಆಗ್ನೆಸ್ ಕಾಲೇಜು –೧೯೨೦ (ಮೊದಲ ಮಹಿಳಾ ಕಾಲೇಜು)**

೧೯೨೦ರ ದಶಕದ ಕಾಲದಲ್ಲಿ ಸಮಾಜದಲ್ಲಿ ಮಹಿಳೆಯ ಸ್ಥಾನ ಹಿಂದಿನ ದಶಕಗಳಿಗಿಂತ ಏನೂ ಭಿನ್ನವಾಗಿರಲಿಲ್ಲ. ಸಮಾಜದಲ್ಲಿ ಮಹಿಳೆಗೆ ಏನೂ ಸ್ಥಾನವಿರಲಿಲ್ಲ. ಆಕೆ ಪುರುಷನಿಗಿಂತ ಕೆಳಮಟ್ಟದವಳು ಎಂದೇ ಪರಿಗಣಿತವಾಗಿತ್ತು. ಶಿಕ್ಷಣದಿಂದ ವಂಚಿತಳಾದ ಅವಳು ಸಮುದಾಯದಲ್ಲಿ ಯಾವುದೇ ರೀತಿಯಲ್ಲೂ ಸದುಪಯುಕ್ತ ಪ್ರಜೆ ಎಂಬ ಭಾವನೆ ಇರಲಿಲ್ಲ. ದಕ್ಷಿಣ ಕನ್ನಡದಲ್ಲಿ ಇಂತಹ ಸ್ಥಿತಿಯಲ್ಲಿ ಶಿಕ್ಷಣದ ಮುಂಚೂಣಿಯಲ್ಲಿದ್ದುಕೊಂಡು ಮಹಿಳೆಯರ ಉನ್ನತಿಗಾಗಿ ಕೆಲಸ ಮಾಡಿದ ಸಿಸ್ಟರ್ ಅಲೋಶಿಯಾ ಜನರ ಈ ಎಲ್ಲ ನಂಬುಗೆಗಳನ್ನೂ ಸುಳ್ಳು ಮಾಡಿದರು.

"ಭಾರತೀಯ ಮಹಿಳೆ ತನ್ನ ವಿರುದ್ಧವಾಗಿ ಆಗುತ್ತಿರುವ ಎಲ್ಲ ಅನ್ಯಾಯಗಳನ್ನೂ ವಿರೋಧಿಸುತ್ತಿದ್ದಾಳೆ. ಪ್ರಾಥಮಿಕ ಶಿಕ್ಷಣದ ಜೊತೆಗೆ ಉನ್ನತ ಶಿಕ್ಷಣದೆಡೆಗೂ ತನ್ನ ಕಣ್ಣು ಹಾಯಿಸುತ್ತಿದ್ದಾಳೆ ಎಂಬ ಅರಿವು ಅವರಿಗಿತ್ತು. ಜಾಗತಿಕ ಇತಿಹಾಸದಲ್ಲಿ ಮಡದಿಯಾಗಿ ಮತ್ತು ಮಾತೆಯಾಗಿದ್ದುಕೊಂಡು ರಾಷ್ಟ್ರದ ಭವಿಷ್ಯವನ್ನು ಮುನ್ನಡೆಸುತ್ತಿದ್ದ ಮಹಿಳೆ ತನ್ನ ಸ್ಥಾನವನ್ನು ಹಾಗೂ ಪಾತ್ರವನ್ನು ಎತ್ತರಕ್ಕೆ ಏರಿಸಬೇಕೆಂಬುದನ್ನು ಅವರು ಮನಗಂಡಿದ್ದರು. ಹಾಗಾಗಿ ಮಹಿಳೆ ತನ್ನ ಸ್ತ್ರೀತ್ವವನ್ನು ಹೆಚ್ಚು ಘನತೆ ಮತ್ತು ಜವಾಬ್ದಾರಿಯೊಂದಿಗೆ ನಿರ್ವಹಿಸುವಲ್ಲಿ ಹೆಚ್ಚಿನ ಶಿಕ್ಷಣ ಕೊಡುವತ್ತ ಸಿಸ್ಟರ್ ಅಲೋಶಿಯಾ ಗಮನಹರಿಸಿದರು. ಈ ನಿಟ್ಟಿನಲ್ಲಿ ಮಂಗಳೂರಿನ ಮಹಿಳೆಯರಿಗೆ ಉನ್ನತ ಶಿಕ್ಷಣವನ್ನು ಕೊಡುವ ಕನಸನ್ನು ಸಾಕಾರಗೊಳಿಸಿದರು".೨೨

"ಸಿಸ್ಟರ್ ಅಲೋಶಿಯಾ ಅವರು ಈ ರೀತಿಯ ಕನಸುಗಳ ಸಾಕಾರಕ್ಕೆ ಆಲೋಚಿಸುತ್ತಿರುವ ಸಂದರ್ಭದಲ್ಲೇ ಮಂಗಳೂರಿನ ಅಪಸ್ಟೋಲಿಕ್ ಸಂಸ್ಥೆ ತನ್ನ ೫೦ನೇ ವರ್ಷದ ಸಂಭ್ರಮವನ್ನು ಆಚರಿಸುತ್ತಿತ್ತು. ಈ ಸಂಭ್ರಮದ ಸಂಕೇತವಾಗಿ ಒಂದು ಉನ್ನತ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಬೇಕು ಎಂದು ಸಿ. ಅಲೋಶಿಯಾ ಮನಸ್ಸು ಮಾಡಿದರು. ಇದೇ ಸಮಯದಲ್ಲಿ ಅಧ್ಯಾಪಕ ಶಿಕ್ಷಣಕ್ಕೆ ಪೂರಕವಾದ ಶೈಕ್ಷಣಿಕ ಅರ್ಹತೆ ಎಸ್.ಎಸ್.ಎಲ್.ಸಿ. ಮಾತ್ರ ಇದ್ದಿತು. ಇದು ಸಾಕಾಗುವುದಿಲ್ಲ ಇದಕ್ಕೆ ಸ್ನಾತಕ ಶಿಕ್ಷಣದ ಅಗತ್ಯವೂ ಇದೆ ಎಂದು ಮದರಾಸು ಪ್ರೆಸಿಡೆನ್ಸಿಯ ಶಿಕ್ಷಣ ವಿಭಾಗ ಘೋಷಿಸಿತು. ಆಗಿನ ಕಾಲದಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿದ ಮೇಲೆ ಉನ್ನತ ಶಿಕ್ಷಣಕ್ಕಾಗಿ ಪಶ್ಚಿಮಘಟ್ಟದಿಂದ ಬಹು ದೂರದ ಮದ್ರಾಸಿನವರೆಗೆ ಹೋಗಲಾಗದ ಹುಡುಗಿಯರು ಇದ್ದರು. ಇಂತಹ ಹುಡುಗಿಯರಿಗೆ ಉನ್ನತ ಶಿಕ್ಷಣದ ಅವಕಾಶವನ್ನು ಒದಗಿಸುವ ಸಲುವಾಗಿ ಸಿ. ಅಲೋಶಿಯಾ ಅವರು ಸೇಂಟ್ ಆಗ್ನೇಸ್ ಕಾಲೇಜನ್ನು ಸ್ಥಾಪಿಸಲು ನಿರ್ಧರಿಸಿದರು. ಆದರೆ ಅದಕ್ಕೆ ಅಗತ್ಯವಾದ ಅರ್ಹ ಅಧ್ಯಾಪಕ ವರ್ಗ, ಸೂಕ್ತ ಕಟ್ಟಡ ಅಥವಾ ಯಾವುದೇ ರೀತಿಯ ಭೌತಿಕ ಸೌಲಭ್ಯಗಳು ಆ ಕಾಲಕ್ಕೆ ಲಭ್ಯವಿರಲಿಲ್ಲ. ಆದರೂ ಇದನ್ನು ಸಾಕಾರಗೊಳಿಸಲೇಬೇಕೆಂಬ ಪಣತೊಟ್ಟು ಪ್ರಯತ್ನಗಳನ್ನು ಮುಂದುವರಿಸಿದರು. ಇದಕ್ಕೆ ಅವರಿಗೆ ಕಂಡ ಏಕೈಕ ಆಶಾಕಿರಣ ಎಂದರೆ ಮಂಗಳೂರಿನ ಅಲೋಶಿಯಸ್ ಕಾಲೇಜಿನ ಜೆಸ್ವಿಟ್ ಪಾದ್ರಿಗಳ ಸಹಕಾರ".೨೩ ಮದ್ರಾಸಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ಅನುಮೋದನೆಯ ಮೇರೆಗೆ ಅಪಸ್ಟೋಲಿಕ್ ಕಾರ್ಮೆಲ್ ಸಂಸ್ಥೆಯ ಚಿನ್ನದ ಹಬ್ಬದ ನೆನಪಿಗಾಗಿ ಕಲಾ ವಿಭಾಗದ ತರಗತಿಗಳು ೧೯೨೦ರ ಜೂನ್‌ನಲ್ಲಿ ಪ್ರಾರಂಭವಾಯಿತು. ಸೇಂಟ್ ಆನ್ಸ್ ಕಿಂಡರ್ ಗಾರ್ಟನ್ ಶಾಲೆಯ ವಠಾರದಲ್ಲಿ ಸೇಂಟ್ ಆನ್ಸ್ ಹೈಸ್ಕೂಲ್ ಮತ್ತು ತೆಲಿಚೇರಿ ಸೇಕ್ರೆಡ್ ಹಾರ್ಟ್ ಸಂಸ್ಥೆಯ ೯

ವಿದ್ಯಾರ್ಥಿನಿಯರು ಪಾಠ ಕೇಳಲು ಸೇರಿದರು. ಈವರೆಗೆ ಸೇಂಟ್ ಆನ್ಸ್ ಕಾಲೇಜು ಎಂದು ಕರೆಯಲಾಗುತ್ತಿದ್ದ ಸಂಸ್ಥೆ ೨ನೇ ಜುಲೈ ೧೯೨೧ರಂದು ಸೇಂಟ್ ಆಗ್ನೆಸ್ ಎಂಬ ನಾಮಕರಣ ಪಡೆದು ಬೆಂದೂರಿನ ಅಂಗಣದಲ್ಲಿ ೨ ಇಂಟರ್ ಮೀಡಿಯಟ್ ತರಗತಿಗಳೊಂದಿಗೆ ಪ್ರಾರಂಭವಾಗಿ ೧೯೨೪ ಜನವರಿ ೪ರಂದು ಬಿ.ಎ. ಪದವಿ ತರಗತಿಗಳು ಆರಂಭವಾಯಿತು. ಹೀಗೆ ಮದ್ರಾಸ್ ವಿಶ್ವವಿದ್ಯಾನಿಲಯದ ಪ್ರಥಮ ದರ್ಜೆ ಕಾಲೇಜುಗಳ ಅಡಿಯಲ್ಲಿ ಸೇಂಟ್ ಆಗ್ನೆಸ್ ಕಾಲೇಜು ಸ್ಥಾನ ಪಡೆಯಿತು. ಇದು ಪ್ರತ್ಯೇಕವಾಗಿ ಮಹಿಳೆಯರಿಗಾಗಿ ತೆರೆದಿಟ್ಟ ಮೊದಲ ಗ್ರಾಮಾಂತರ ಪ್ರದೇಶದ ಕಾಲೇಜಾಗಿಯೂ ದಾಖಲಾಯಿತು.

ಕೇವಲ ಗ್ರಂಥರಾಶಿ ಮತ್ತು ಉಪನ್ಯಾಸಗಳಿಂದ ಶಿಕ್ಷಣ ಸಹಜವಾಗಿ ಮೂಡಿಸಬೇಕಾದ ಮನಸ್ಸನ್ನು ಮತ್ತು ಬುದ್ಧಿಯನ್ನು ಬೆಳೆಸಲಾಗದು ಎಂದರಿತು. ಸಂಸ್ಥೆಯಲ್ಲಿ ಅನೇಕ ಸಹಪಠ್ಯ ಚಟುವಟಿಕೆಗಳನ್ನು ಪ್ರಾರಂಭಿಸಲಾಗಿತ್ತು. ಹಿಂದುಳಿದ ಬಡ ಹಾಗೂ ಅಶಕ್ತ ಮಹಿಳೆಯರಿಗೆ ಸ್ವಾವಲಂಬನೆಯ ದಾರಿಯನ್ನು ತೋರಿಸುವ ನಿಟ್ಟಿನಲ್ಲಿ 'ಸುಮಂಗಳಾ' ಎಂಬ ಮಹಿಳಾ ಸಂಸ್ಥೆಯನ್ನು ಪ್ರಾರಂಭಿಸಿ ಬೇಸಿಕ್ ಕಂಪ್ಯೂಟರ್ ಕಲಿಕೆ, ಹೊಲಿಗೆ ಮತ್ತು ಬೆರಳಚ್ಚುಗಾರಿಕೆಯನ್ನು ಉಚಿತವಾಗಿ ಕಲಿಸುವುದರ ಜೊತೆಗೆ ಸ್ತ್ರೀಶಕ್ತಿ ಸಂಘವನ್ನು ಸ್ಥಾಪಿಸಿ ಅದರಲ್ಲಿ ಹಣ ಉಳಿತಾಯವನ್ನು ಮಾಡಿದೆ. ಅಲ್ಲದೆ ಈ ಮಹಿಳೆಯರಿಗೆ ಸ್ವ-ಉದ್ಯೋಗ ಮಾಡಲು ಸಾಲದ ಉಳಿತಾಯವನ್ನು ಮಾಡಿದೆ. ಅಲ್ಲದೆ ಈ ಮಹಿಳೆಯರಿಗೆ ಸ್ವ-ಉದ್ಯೋಗ ಮಾಡಲು ಸಾಲದ ಸೌಲಭ್ಯವನ್ನು ಕೂಡ ಕಲ್ಪಿಸಿತು. ಹೀಗೆ ಹಲವಾರು ಚಟುವಟಿಕೆಗಳ ಮೂಲಕ ಹೆಣ್ಣು ಮಕ್ಕಳ ಪ್ರಗತಿಗಾಗಿ ಸತತವಾಗಿ ಶ್ರಮಿಸುತ್ತಲೇ ಇದೆ. ೨೦೦೬ರಲ್ಲಿ ಸಂಸ್ಥೆಯು ಯುಜಿಸಿಯಿಂದ 'College with Potential for Excellence' ಎಂಬ ಮಾನ್ಯತೆ ಪಡೆಯಿತು ಮತ್ತು ನ್ಯಾಕ್ ಸಂಸ್ಥೆಯಿಂದ 'ಎ' ಗ್ರೇಡ್ ಮಾನ್ಯತೆಯನ್ನು ಪಡೆಯಿತು. ಜೊತೆಗೆ ಹಲವಾರು ರಾಷ್ಟ್ರೀಯ, ಅಂತಾರಾಷ್ಟ್ರೀಯ ಪ್ರಶಸ್ತಿಗಳನ್ನು ಒಂದು ಮಹಿಳಾ ಕಾಲೇಜು ಪಡೆದಿರುವುದು ಹೆಮ್ಮೆಯ ವಿಚಾರವಾಗಿದೆ.

### ೨.೩.೮. ಬೆಸೆಂಟ್ ಶಿಕ್ಷಣ ಸಂಸ್ಥೆಗಳು:

ಬಾಲಕಿಯೊಬ್ಬಳು ಕಲಿತರೆ ಶಾಲೆಯೊಂದು ತೆರೆದಂತೆ ವಿದ್ಯೆಯು ಮಹಿಳೆಗೆ ಜ್ಞಾನದೊಂದಿಗೆ ಶಕ್ತಿಯನ್ನು ನೀಡುತ್ತದೆ. ಆದರೆ ವಿದ್ಯೆ ಗಂಧಗಾಳಿಯು ಇಲ್ಲದ ಒಂದು ಶತಮಾನದ ಹಿಂದೆ ಸ್ತ್ರೀ ಶಿಕ್ಷಣದ ಚಿಂತಕಿ, ಮಹಿಳಾ ಚೇತನದ ಉದ್ಧಾರಕಿ ಎಂದರೆ ಐರಿಸ್ ಮಹಿಳೆ ಡಾ| ಅನ್ನಿಬೆಸಂಟ್ ೧೮೯೩ರಲ್ಲಿ ಭಾರತಕ್ಕೆ ಬಂದರು. ಭಾರತೀಯರ ಅಜ್ಞಾನ, ಮೂಢನಂಬಿಕೆ ಅದರಲ್ಲೂ ಮಹಿಳೆಯರ ದುಸ್ಥಿತಿಯ ಬಗ್ಗೆ ಅರಿವು ಉಂಟಾಗಿ "ಇಲ್ಲಿನ ಸ್ತ್ರೀಯರಿಗೆ ಶಿಕ್ಷಣ ಕಡ್ಡಾಯವಾಗಬೇಕು. ಅದೂ ದೊಡ್ಡ ಪ್ರಮಾಣದಲ್ಲಿ ಶಿಕ್ಷಣವಿಲ್ಲದೇ ಅವರ ಉದ್ಧಾರವಿಲ್ಲ, ದೇಶ ರಕ್ಷಣೆಯೂ ಸಾಧ್ಯವಿಲ್ಲ"[೨೪] ಎಂಬ ದೃಷ್ಟಿಯಿಂದಲೇ ಕಾರ್ಯೋನ್ಮುಖರಾದರು. "೧೮೯೮ರಲ್ಲಿ ಬನಾರಸಿನಲ್ಲಿ 'ಸೆಂಟ್ರಲ್ ಹಿಂದೂ ಕಾಲೇಜು' ಸ್ಥಾಪಿಸಿ ಬಳಿಕ ಅನೇಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನು ಅಲ್ಲಲ್ಲಿ ಸ್ಥಾಪಿಸಲು ನಿರ್ಧರಿಸಿದರು. ಇಂತಹ ಉದಾತ್ತ ಉದ್ದೇಶಕ್ಕಾಗಿ ಡಾ| ರವೀಂದ್ರನಾಥ ಠಾಗೂರರು ಕುಲಪತಿ, ಅನ್ನಿಬೆಸೆಂಟ್ ಉಪಕುಲಪತಿ ಮತ್ತು ಡಾ| ಜಿ.ಎಸ್. ಅರುಂಡೇಲ್ ರಿಜಿಸ್ಟ್ರಾರ್ ಆಗಿರುವ ರಾಷ್ಟ್ರೀಯ ಶಿಕ್ಷಣ ಸಂಘವನ್ನು ೧೯೧೭ರಲ್ಲಿ ಸ್ಥಾಪಿಸಲಾಯಿತು. ಡಾ| ಜಿ.ಎಸ್. ಅರುಂಡೇಲ್ ಅವರು ಭಾರತದಾದ್ಯಂತ ಸಂಚರಿಸುತ್ತ ರಾಷ್ಟ್ರೀಯ ಶಿಕ್ಷಣದ ಮಹತ್ವವನ್ನು ಬಿತ್ತರಿಸ ತೊಡಗಿದರು. ಮಂಗಳೂರಿನಲ್ಲಿದ್ದ ಅನ್ನಿಬೆಸೆಂಟರ್‌ರ ಹಿಂಬಾಲಕರು ೧೯೧೮ರ ಏಪ್ರಿಲ್‌ನಲ್ಲಿ ಒಂದು ವಾರವನ್ನು 'ರಾಷ್ಟ್ರೀಯ ಶಿಕ್ಷಣ ವಾರ'ವನ್ನಾಗಿ ಆಚರಿಸಿ ಆ ಬಗ್ಗೆ ಜನಜಾಗೃತಿ ಮೂಡಿಸಿದರು. ಡಾ| ಜಿ.ಎಸ್. ಅರುಂಡೇಲ್ ಅವರೂ ಈ ಸಪ್ತಾಹದಲ್ಲಿ ಭಾಗವಹಿಸಿ ಮನವಿ ಸಹಿತ ಉಪನ್ಯಾಸ ನೀಡಿದರು. ಇವೆಲ್ಲದರ ಫಲವಾಗಿ ಸಾರ್ವಜನಿಕರಿಂದ ವಿಶೇಷವಾಗಿ ಮಹಿಳೆಯರಿಂದ ಉತ್ತಮ ಪ್ರತಿಕ್ರಿಯೆ ದೊರೆತು ದೇಣಿಗೆಗಳ, ಆಭರಣಗಳ

ಸುರಿಮಳೆಯಾಯಿತು ಪರಿಣಾಮವಾಗಿ 'ಬಾಲಿಕಾ ಶಿಕ್ಷಣ ಸಭಾ' ಎಂಬ ಸಂಘವು ಸ್ಥಾಪನೆಯಾಯಿತು."[೨೫] ಈ ಹಿನ್ನಲೆಯಲ್ಲಿ ಭಾರತದ ಇನ್ನಿತರ ಊರುಗಳಲ್ಲಿ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲಿ ಸಹಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಯೋಜನೆಯಾದಾಗ ಮಂಗಳೂರಿನಲ್ಲಿ ಬಾಲಕಿಯರಿಗಾಗಿಯೇ ಶಾಲೆಯನ್ನು ಸ್ಥಾಪಿಸಬೇಕೆಂಬ ಮಹದಾಸೆ ಡಾ। ಜಿ. ಎಸ್. ಅರುಂಡೇಲ್ ಮತ್ತು ಅನ್ನಿಬೆಸಂಟರಿಗಿದ್ದ ಕಾರಣದಿಂದಾಗಿ ೧೯೧೮ರ ಜೂನ್ ೧೭ರಂದು ಬಾಲಕಿಯರಿಗಾಗಿ ಪ್ರಾಥಮಿಕ ಶಾಲೆಯೊಂದು 'ನ್ಯಾಷನಲ್ ಸ್ಕೂಲ್' ಪ್ರಾರಂಭವಾಯಿತು. ಸ್ವಂತ ಕಟ್ಟಡವಿಲ್ಲದಿದ್ದ ಸಂದರ್ಭದಲ್ಲಿ ಮಂಗಳೂರಿನ ವಿದ್ಯಾಪ್ರೇಮಿಗಳಾದ ಕಮಲಾದೇವಿ ಚಟ್ಟೋಪಾಧ್ಯಾಯರು, ಡಾ। ಬೆನಗಲ್ ಸಂಜೀವರಾಯರು ಮತ್ತು ಅವರ ಪತ್ನಿ ಪದ್ಮಾಬಾಯಿ ಎಸ್. ರಾವ್ ಸಹಕರಿಸಿದ್ದಾರೆ. ಪದ್ಮಾಬಾಯಿಯವರೆ ಮೊದಲ ಮುಖ್ಯೋಪಾಧ್ಯಾಯಿನಿಯಾಗಿ ಕಾರ್ಯನಿರ್ವಹಿಸಿದರು. ಡಾ। ಪ್ರೋ. ಬೆನಗಲ್ ಸಂಜೀವರಾಯರು ಮದ್ರಾಸಿನ ನ್ಯಾಷನಲ್ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದರೂ ಮಂಗಳೂರಿಗೆ ಆಗಾಗ ಬಂದು ನಗರದ ಕೇಂದ್ರ ಪ್ರದೇಶ ಕೊಡಿಯಾಲ್‌ಬೈಲ್‌ನಲ್ಲಿ ಶಾಲಾ ಕಟ್ಟಡಕ್ಕಾಗಿ ಸ್ಥಳ ಖರೀದಿಸಿದರು. ಶಾಲಾ ಕಟ್ಟಡದ ಶಂಕು ಸ್ಥಾಪನೆಗೆ ೧೯೧೮ ನವೆಂಬರ್ ಆರರಂದು ಅನ್ನಿಬೆಸೆಂಟರು ಬಂದರು.

ಅನಿವಾರ್ಯ ಕಾರಣಗಳಿಂದ ಪದ್ಮಾಬಾಯಿಯವರು ಬೆನಾರಸಿಗೆ ತೆರಳಿದಾಗ ಶಾಲೆಯ ಉಸ್ತುವಾರಿಯನ್ನು ಮಿಸೆಸ್ ಮಾರ್ಗರೇಟ್ ಕಸಿನ್ಸ್ ನೋಡಿಕೊಂಡರು. ಇವರ ನಿರ್ಗಮದ ಬಳಿಕ ಎಚ್. ಮನೋರಮಾ ಬಾಯಿಯವರು ಮೇಲ್ವಿಚಾರಕರಾಗಿದ್ದರು. ೧೯೨೮ರಲ್ಲಿ ಸರಕಾರದಿಂದ ಶಾಲೆಗೆ ಮಾನ್ಯತೆ ಲಭಿಸಿದ್ದರಿಂದ ಪ್ರಗತಿಪಥದಲ್ಲಿ ಮುನ್ನಡೆಯಿತು. ಸುಶೀಲಾಬಾಯಿ, ಟಿ. ಸುಂದರಿಬಾಯಿ, ಎ. ವಿಜಯಲಕ್ಷ್ಮೀ, ಎನ್. ಶಿವಮ್ಮ, ಲಕ್ಷ್ಮೀಬಾಯಿ ಹೀಗೆ ಮುಖ್ಯಸ್ಥರ ಪಟ್ಟಿ ಸಾಗುತ್ತದೆ. ಇವರೆಲ್ಲ ಅಧ್ಯಾಪನದೊಂದಿಗೆ ಭಾರತೀಯ ಸಂಸ್ಕೃತಿಭಾವ ಬಿತ್ತುತ್ತ, ಮೌಲ್ಯಗಳನ್ನು ಪೋಷಿಸುತ್ತ ಜೊತೆಗೆ ಗೃಹಕುಶಲಕಲೆಗಳಾದ ಕಸೂತಿ, ಹೆಣಿಗೆ, ಸಂಗೀತ, ಭಜನೆ, ಚಿತ್ರಕಲೆ, ತೋಟಗಾರಿಕೆ, ತಕಲಿಯಿಂದ ನೂಲುವುದು ಇತ್ಯಾದಿಗಳೆಲ್ಲ ಪಾಠದೊಂದಿಗೆ ಜತೆ ಜತೆಯಾಗಿ ಸಾಗುತ್ತಿತ್ತು.

"ಅನ್ನಿಬೆಸೆಂಟರಿಂದ ಸ್ಥಾಪಿತಗೊಂಡ ಪ್ರಾಥಮಿಕ ಶಾಲೆಗೆ ಅನೇಕ ಧೀಮಂತ ರಾಷ್ಟ್ರ ನಾಯಕರು ಭೇಟಿ ನೀಡಿದ್ದಾರೆ. ಡಾ। ಸಿ.ಎಸ್. ಆಂಡ್ರ್ಯೂಸ್ (೧೯೨೨). ಸಿ.ಪಿ. ರಾಮಸ್ವಾಮಿ ಅಯ್ಯಂಗಾರ್ (೧೯೨೨), ಡಾ। ರವೀಂದ್ರನಾಥ ಠಾಗೂರ್ (೧೯೨೨). ಪ್ರೋ. ಖಾರ್ವೆ (೧೯೨೪). ಮಹಾತ್ಮಾಗಾಂಧೀಜಿ (೧೯೩೨). ಸರ್. ಮಿರ್ಜಾ ಇಸ್ಮಾಯಿಲ್ (೧೯೪೪) ಹೀಗೆ ಮೊದಲಾದವರು ಭೇಟಿ ನೀಡಿದ್ದಾರೆ".[೨೬] ಇವುಗಳು ಶಾಲೆಯ ಇತಿಹಾಸದಲ್ಲಿ ಅತ್ಯಪೂರ್ವ ಘಟನೆಯಾಗಿ ದಾಖಲೆಯಾಗಿದೆ. "೧೯೨೮ರಲ್ಲಿ ಸರಕಾರದ ಮಾನ್ಯತೆಯೊಂದಿಗೆ ಶಾಲೆಯನ್ನು 'ಎಲಿಮೆಂಟರಿ ಸ್ಕೂಲ್' ಎಂದು ಗುರುತಿಸಲಾಯಿತು. ೧೯೨೯ರಲ್ಲಿ ಅದು 'ಹೈಯರ್ ಎಲಿಮೆಂಟರಿ' ಶಾಲೆಯಾಯಿತು. ೧೯೩೮ರಲ್ಲಿ ಅದು 'ಬೆಸೆಂಟ್ ನ್ಯಾಶನಲ್ ಗರ್ಲ್ಸ್ ಎಲಿಮೆಂಟರಿ ಸ್ಕೂಲ್' ಎಂದು ಪುನರ್ ನಾಮಕರಣಗೊಂಡಿತು. ೧೯೪೦ರಲ್ಲಿ ಹೊಸದಾಗಿ ಪ್ರೌಢಶಾಲೆ ಆರಂಭವಾದಾಗ ಈ ಕಿರಿಯ ತರಗತಿಗಳು ಅದಕ್ಕೆ ಸೇರ್ಪಡೆಗೊಂಡವು"[೨೭]

ಬೆಸೆಂಟ್ ಶಾಲೆಗೂ ಖ್ಯಾತ ಸಾಹಿತಿ ಡಾ। ಶಿವರಾಮ ಕಾರಂತರಿಗೂ ಇದ್ದ ಬಾಂಧವ್ಯ ವಿಶೇಷವಾದುದ್ದು. ಅವರ ಹಲವಾರು ನೃತ್ಯ, ಗೀತನಾಟಕಗಳ ಪ್ರಯೋಗಕ್ಕೆ ಶಾಲಾ ವೇದಿಕೆಯು ರಂಗಸ್ಥಳವಾಯಿತು. ಇದಕ್ಕೆಲ್ಲಾ ಕಾರಂತರೇ ನೃತ್ಯಗುರು, ಮೇಕಪ್ ಮಾಡುವವರು. ನಿರ್ದೇಶಕರು ಎಲ್ಲವೂ ಆಗಿದ್ದರು. ಪ್ರಾಥಮಿಕ. ಪ್ರೌಢಶಾಲಾ ವಿದ್ಯಾರ್ಥಿನಿಯರೇ ನಟಿಯರು ಹೀಗೆ ಹಲವಾರು ಹುಡುಗಿಯರು ಆಯ್ಕೆಯಾಗಿ ತರಬೇತಿ ಪಡೆದುಕೊಂಡು ಕುಣಿದು. ನಟಿಸಿ ಖುಷಿಪಡುತ್ತಿದ್ದರು. ಕಾರಂತರ ಮಕ್ಕಳಿಗಾಗಿ ಆಗಾಗ ಸಾಹಿತ್ಯ ಶಿಬಿರಗಳನ್ನು ನಡೆಸಿ ಮಕ್ಕಳ ಸುಪ್ತ ಪ್ರತಿಭೆಗೆ ನೀರೆಯುತ್ತಿದ್ದರೆಂದೂ ಅದೂ ತನಗೆ ಸ್ಫೂರ್ತಿದಾಯಕವಾಗಿತ್ತು ಎಂದೂ ಬೆಸೆಂಟ್ ಹಳೆ ವಿದ್ಯಾರ್ಥಿನಿ. ಖ್ಯಾತ ಲೇಖಕಿ ಆನಂದಿ ಸದಾಶಿವ ರಾವ್ ಅವರು ತಮ್ಮ

ಬದುಕು ಬರಹದಲ್ಲಿ ಸ್ಮರಿಸಿಕೊಂಡಿದ್ದಾರೆ.

ಪ್ರಕೃತಿಯ ಆರಾಧನೆ, ಸಂಸ್ಕೃತಿ ವೈಭವ, ಒಗ್ಗಟ್ಟಿನ ಕೆಲಸ ಇತ್ಯಾದಿಗಳ ಸಮ್ಮಿಲನವಾದ ಅಪೂರ್ವ ಸಮಾರಂಭವೊಂದನ್ನು ಶಾಲೆಯಲ್ಲಿ ಏರ್ಪಡಿಸುತ್ತಿದ್ದರು. ಅದೇ 'ವಸಂತೋತ್ಸವ' ವಸಂತ ಮಾಸದಲ್ಲಿ ಮಾರ್ಚ್/ಏಪ್ರಿಲ್ ತಿಂಗಳಲ್ಲಿ ಒಂದು ವಾರವಿಡೀ ಉತ್ಸವಾಚರಣೆ ಕಾರ್ಯಕ್ರಮಗಳ ಸರಣಿ, ವಸಂತ ರಾಣಿಯ ಮೆರವಣಿಗೆ ವಸ್ತುಪ್ರದರ್ಶನ ನಾಟಕಾದಿಗಳನ್ನು ನಡೆಸುತ್ತಿದ್ದರು. "ಶಾಲಾ ವಿದ್ಯಾರ್ಥಿ ನಾಯಕಿಗೆ ವಸಂತ ರಾಣಿಯ ಪಟ್ಟ, ಬಿಳಿಸೀರೆ, ಕಿರೀಟ, ಹೂಗಳ ಅಲಂಕಾರದೊಂದಿಗೆ ಮೆರವಣಿಗೆ, ಪ್ರೌಢಶಾಲೆಯಿಂದ ಎದುರಿನ ರಸ್ತೆ ಹಾದು ಪ್ರಾಥಮಿಕ ಶಾಲಾ ಸಭಾಂಗಣದವರೆಗೆ, ಮುಂಭಾಗದಲ್ಲಿ ನಾಲ್ವರು ಬಾಲಕಿಯರು ಪನ್ನೀರು. ದೀಪ. ಕುಂಕುಮ. ಆರತಿಗಳನ್ನು ನಾಜೂಕಾಗಿ ಹಿಡಿದುಕೊಂಡರೆ ಅಕ್ಕಪಕ್ಕದಲ್ಲಿ ಪ್ರಾಥಮಿಕ ಶಾಲೆಯ ನಾಲ್ವರು ಪುಟ್ಟ ಬಾಲಕಿಯರು ತಟ್ಟೆ ತುಂಬಾ ಹಳದಿ ಹೂರಾಶಿ ಹಿಡಿದುಕೊಂಡು ಮಧ್ಯದಲ್ಲಿ ಶೋಭಿಸುವ ವಸಂತರಾಣಿಗೆ ಎರಚುತ್ತಾ 'ವಸಂತರಾಣಿಗೆ ಜೈ' ಎಂಬ ಜಯಘೋಷದೊಂದಿಗೆ ಮೆಲುಗತಿಯ ಕಾಲ್ನಡಿಗೆಯಲ್ಲಿ ಸಾಗುವುದು. ಬರಿಗೈಯ ಇತರ ಮಕ್ಕಳೆಲ್ಲಾ ನೀರವ ಹಿಂಬಾಲಕರು, ಮುಖದ ತುಂಬಾ ಅರಳು ನಗು ಹೊತ್ತು ಸಭಾಂಗಣಕ್ಕೆ ತಲುಪಿ, ಅಲ್ಲಿ ದೀಪವಿರಿಸಿ ಬಳಿಕ ವಸಂತರಾಣಿಯಿಂದ ಉದ್ಘಾಟನಾ ಭಾಷಣ, ಆ ಬಳಿಕ ಸಾಂಸ್ಕೃತಿಕ ಕಾರ್ಯಕ್ರಮಗಳು, ಮುಂದಿನ ಆರು ದಿನಗಳಲ್ಲಿ ಮಕ್ಕಳು ಕರಕುಶಲ ವಸ್ತುಪ್ರದರ್ಶನ, ನಾಟಕ ಪ್ರದರ್ಶನ ಇತ್ಯಾದಿ ೧೯೫೨ರಿಂದ ಪ್ರಾರಂಭವಾಗಿ ೧೯೭೦ರವರೆಗೂ ಅಪೂರ್ವ ವಸಂತೋತ್ಸವ ಆಚರಿಸುತ್ತದೆ"[೨೮]

ಹೀಗೆ ಬೆಸೆಂಟ್ ಶಿಕ್ಷಣ ಸಂಸ್ಥೆ ನ್ಯಾಷನಲ್ ಸ್ಕೂಲ್ ಸ್ಥಾಪಿಸಿದ ಬಳಿಕ, ಬೆಸೆಂಟ್ ಬಾಲವಾಡಿ, ಬೆಸೆಂಟ್ ನ್ಯಾಷನಲ್ ಗರ್ಲ್ಸ್ ಜ್ಯೂನಿಯರ್ ಕಾಲೇಜು, ಬೆಸೆಂಟ್ ಮಹಿಳಾ ಕಾಲೇಜು, ಬೆಸೆಂಟ್ ಇಂಗ್ಲೀಷ್ ಸ್ಕೂಲ್, ಹೀಗೆ ಕರಾವಳಿಯಲ್ಲಿ ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ಕೊಡುತ್ತಾ ಬಂದಿದೆ.

## ೨.೪. ಕರಾವಳಿಯಲ್ಲಿ ಮಹಿಳಾ ಸುಧಾರಣೆಗೆ ಗಾಂಧೀಜಿಯವರ ಪ್ರಭಾವ:-

ಕರಾವಳಿಯಲ್ಲಿ ಮಹಿಳೆಯರ ಶ್ರೇಯೋಭಿವೃದ್ಧಿಗಾಗಿ ಸಾಕಷ್ಟು ಪ್ರಯತ್ನಗಳು ಆಗಿವೆ. ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಸಮಾಜ ಸುಧಾರಕರು ಮಹಿಳೆಯರ ಬಗೆಗಿನ ಪ್ರಗತಿಪರ ಚಿಂತನೆ, ಸುಧಾರಣೆಗೆ ನಾಂದಿ ಹಾಡಿದವರಾಗಿದ್ದಾರೆ. ಇವರ ಜೊತೆ ಜೊತೆಗೆ ಕ್ರಿಶ್ಚನ್ ಮಿಶನರಿಗಳಿಂದ ಸ್ಥಾಪಿಸಲ್ಪಟ್ಟ ಶಿಕ್ಷಣ ಸಂಸ್ಥೆಗಳು ವಿದ್ಯಾಭ್ಯಾಸದ ಅನುಕೂಲ ಒದಗಿಸಿತು. ಇದರಿಂದ ಅಡುಗೆ ಮನೆಯೇ ತನ್ನ ಪ್ರಪಂಚ ಎಂಬಂತ್ತಿದ್ದ ಮಹಿಳೆ ಸಾರ್ವಜನಿಕ ಜೀವನದಲ್ಲಿ ಹೊಸ ಘನತೆ, ಗೌರವ, ರಾಷ್ಟ್ರದ ಮುಖ್ಯವಾಹಿನಿಯಲ್ಲಿ ಹೊಸ ಸ್ಥಾನಮಾನ, ಹೊಸ ಆತ್ಮವಿಶ್ವಾಸ, ಶೋಷಣೆಯ ವಿರುದ್ಧ ತಾವೇ ಸ್ವಯಂ ಹೋರಾಡಬಹುದೆಂಬ ಹೊಸ ಹುರುಪು ಹುಟ್ಟಿಕೊಂಡಿತು. ಇವುಗಳೆಲ್ಲವನ್ನೂ ಗಳಿಸಲು ಮಹಿಳೆಯರಿಗೆ ಮಹಾತ್ಮಾಗಾಂಧೀಜಿಯವರು ನೆರವಾಗಿದ್ದರು. ಜಗತ್ತಿನ ಎಲ್ಲ ದೇಶಗಳಲ್ಲೂ ಮಾನವ ಸಮಾಜದ ಕಟ್ಟು ಕಟ್ಟಲೆಗಳು, ಆಚಾರ ವಿಚಾರಗಳು ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಗೆ ಪೂರಕವಾಗಿವೆ. ಇದರಿಂದಾಗಿಯೇ ಮಹಿಳೆಯರು ಅಸಮಾನತೆ ಮತ್ತು ಶೋಷಣೆಗೆ ತುತ್ತಾಗಿರುವುದು. ಸಮಾಜ ಸುಧಾರಕರ ಕೆಲಸಗಳೆಲ್ಲಾ ಪ್ರಗತಿಪರ ಸುಧಾರಣೆಗಳ ಬಗ್ಗೆ ಜನರಿಗೆ ಅರಿವು ಮೂಡಿಸುವುದು ಮತ್ತು ಸ್ತ್ರೀಯರಿಗೆ ಆಶ್ರಯಧಾಮಗಳನ್ನೂ, ಶಿಕ್ಷಣಾವಕಾಶಗಳನ್ನೂ ಒದಗಿಸುವ ಪ್ರಯತ್ನಕ್ಕೆ ಸೀಮಿತವಾಗಿದ್ದಿತು ಎಂದು ಹೇಳಬಹುದು. ಆದರೆ ಮಹಿಳಾ ಸಮೂಹವನ್ನು ಸಂಘಟಿಸಿ ಅವರ ಹಕ್ಕುಗಳ ಸಾಧನೆಗಷ್ಟೇ ಅಲ್ಲದೆ ರಾಷ್ಟ್ರೀಯ ಸ್ವಾತಂತ್ರ್ಯ ಸಾಧನೆಯಂತಹ ಹಿರಿಯ ಧ್ಯೇಯಗಳಿಗೆ ಸ್ತ್ರೀಶಕ್ತಿಯನ್ನು ಒಗ್ಗೂಡಿಸಿದವರು ಮಹಾತ್ಮಾ

ಗಾಂಧೀಜಿಯವರು ಎಂದು ಹೇಳಬಹುದಾಗಿವೆ.

೧೯೨೦ರಿಂದೀಚೆಗೆ ಮಹಾತ್ಮಾ ಗಾಂಧೀಜಿಯವರು ಮೂರು ಬಾರಿ ಮಂಗಳೂರಿಗೆ ಭೇಟಿ ನೀಡಿದ್ದಾರೆ. ಈ ಸಂದರ್ಭದಲ್ಲಿ 'ಸ್ತ್ರೀ ಅಬಲೆಯಲ್ಲ, ಸಬಲೆ' ಎಂದು ಕರಾವಳಿಯ ಮಹಿಳೆಯರಲ್ಲಿ ಆತ್ಮವಿಶ್ವಾಸವನ್ನು ತುಂಬಿ 'ಪ್ರೀತಿ, ಸಂಯಮ, ಕಷ್ಟ ಸಹಿಷ್ಣುತೆಯ ಪ್ರತೀಕವಾಗಿರುವ ಸ್ತ್ರೀಶಕ್ತಿಯನ್ನು ವಿವೇಚನಾ ಚಳವಳಿಗೆ ಸಜ್ಜುಗೊಳಿಸಿದ ಹಿರಿಮೆ ಗಾಂಧೀಜಿಯವರಿಗೆ ಸಲ್ಲುತ್ತದೆ. ಸ್ತ್ರೀಶಕ್ತಿಯನ್ನು ಇಡೀ ಜನ ಸಮುದಾಯದ ಹಿತರಕ್ಷಣೆಯ ಹೋರಾಟಕ್ಕೆ ಸಂಘಟಿಸುವ ಕಾರ್ಯವನ್ನು ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿ ಆರಂಭಿಸಿದರು. ಬಿಳಿಯರ ಸರ್ಕಾರದ ವರ್ಣದ್ವೇಷ ನೀತಿ ವಿರುದ್ಧ ನಡೆಸಿದ ಅಹಿಂಸಾತ್ಮಕ ಸತ್ಯಾಗ್ರಹದ ಹೋರಾಟಗಳಲ್ಲಿ ಅದ್ಭುತ ಯಶಸ್ಸನ್ನು ಗಳಿಸಿದರು. ದಕ್ಷಿಣದ ಆಫ್ರಿಕಾದ ನ್ಯಾಯಾಲಯವು ಅಲ್ಲಿ ನೆಲೆಸಿದ್ದ ಹಿಂದೂ ಮತ್ತಿತರ ಜನಾಂಗಗಳ ವೈವಾಹಿಕ ಸ್ಥಾನ ಮಾನವನ್ನು ಅಸಿಂಧುವೆಂದು ಘೋಷಿಸಿದಾಗ ಗಾಂಧೀಜಿ ನಡೆಸಿದ ಸತ್ಯಾಗ್ರಹ ಹೋರಾಟದಲ್ಲಿ ಮಹಿಳೆಯರನ್ನೇ ಮುಂಚೂಣಿಯ ನಾಯಕಿಯರನ್ನಾಗಿ ಮಾಡಿದ ಪರಿಣಾಮವಾಗಿ ಅಲ್ಲಿನ ಭಾರತೀಯರು ತಮ್ಮ ಕೆಲವು ಹಕ್ಕುಗಳನ್ನು ಪಡೆದುಕೊಂಡದೇ ಅಲ್ಲದೆ ಸ್ತ್ರೀಶಕ್ತಿಯ ಸಾಮರ್ಥ್ಯದ ಅರಿವು ಆಯಿತು ಎಂದು ಇಲ್ಲಿ ಸ್ಮರಿಸಿಕೊಳ್ಳಲಾಗುತ್ತದೆ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ನಡೆಸಿದ ಎಲ್ಲಾ ಅಹಿಂಸಾತ್ಮಕ ಹೋರಾಟಗಳಲ್ಲೂ ಮಹಿಳೆಯರು ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿ ಸೆರೆಮನೆ ವಾಸವನ್ನು ಅನುಭವಿಸಿದ್ದಾರೆ.

ಅಸಹಕಾರ ಚಳುವಳಿಯ ಉದ್ದೇಶವನ್ನು ಜನಪ್ರಿಯಗೊಳಿಸುವುದಕ್ಕಾಗಿ ಮತ್ತು ಭಾರತೀಯರ ಬೆಂಬಲಕ್ಕಾಗಿ ಮಹಾತ್ಮಾಗಾಂಧಿಯವರು ರಾಷ್ಟ್ರವ್ಯಾಪಿ ಪ್ರವಾಸವನ್ನು ಕೈಗೊಂಡಿದ್ದಾರೆ. ಹೀಗೆ ೧೯೨೦ರ ಆಗಸ್ಟ್ ೧೯ರಂದು ಮಂಗಳೂರಿಗೆ ಭೇಟಿ ನೀಡುತ್ತಾರೆ, ಎರಡನೇ ಬಾರಿ ಖಾದಿ ಪ್ರಚಾರ ಪ್ರವಾಸದ ಭಾಗವಾಗಿ ೧೯೨೭ರ ಅಕ್ಟೋಬರ್ ೨೬ರಂದು ಭೇಟಿ ನೀಡುತ್ತಾರೆ, ಮೂರನೇ ಬಾರಿ ಅಸ್ಪೃಶ್ಯರ ಏಳಿಗೆಯ ಉದ್ದೇಶಕ್ಕಾಗಿ ೧೯೩೪ ಫೆಬ್ರವರಿಯಲ್ಲಿ ಭೇಟಿ ನೀಡುತ್ತಾರೆ. ಗಾಂಧೀಜಿಯವರ ಮೂರು ಬಾರಿ ಮಂಗಳೂರಿನ ಭೇಟಿಯು ಇಲ್ಲಿನ ಜನರ ಮೇಲೆ ವಿಶಿಷ್ಟ ಪ್ರಭಾವ ಬೀರಿತು. ಮಂಗಳೂರು ಮತ್ತು ಉಡುಪಿ ಸ್ವಾತಂತ್ರ್ಯ ಚಳುವಳಿಯ ಕ್ರಿಯಾಶೀಲ ಕೇಂದ್ರಗಳಾಗಿ ಬಿಟ್ಟವು. ಮಂಗಳೂರು, ಉಡುಪಿ, ಪೆರ್ಡೂರು, ಕಾಸರಗೋಡು ಮೊದಲಾಗಿ ದಕ್ಷಿಣ ಕನ್ನಡದಾದ್ಯಂತ ಅನೇಕ ರಾಷ್ಟ್ರೀಯ ಶಾಲೆಗಳು ಸ್ಥಾಪಿತಗೊಂಡವು, ವಿದೇಶಿ ವಸ್ತ್ರಗಳು ಬಹಿಷ್ಕರಿಸಿಗೊಂಡವು. ಈ ವೇಳೆಯಲ್ಲಿ ವಿದೇಶಿ ವಸ್ತ್ರಗಳ ಬಹಿಷ್ಕಾರ ಮತ್ತು ಮದ್ಯಪಾನ ಅಂಗಡಿಗಳಿಗೆ ಜನರು ಹೋಗದಂತೆ ತಡೆಯುವ ಕಾರ್ಯಗಳಿಗೆ ಮಹಿಳೆಯರನ್ನೇ ಗಾಂಧೀಜಿ ನಿಯುಕ್ತಿಗೊಳಿಸಿದ್ದರು. ಮಂಗಳೂರಿನ ನ್ಯಾಷನಲ್ ಗರ್ಲ್ಸ್ ಹೈಸ್ಕೂಲ್‌ನ ಕಾರ್ಯಕ್ರಮದ ಸಭೆಯಲ್ಲಿ ೧೫೦೦ ಮಹಿಳೆಯರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಗಾಂಧೀಜಿಯವರು ಮಹಿಳೆಯರಿಗೆ ಸ್ತ್ರೀಯರ ಉದ್ಧಾರ ಸ್ತ್ರೀಯರಿಂದಲೇ ಆಗಬೇಕೆಂಬುದನ್ನು ತಿಳಿಸುತ್ತಾರೆ. "ಪ್ರತಿಯೊಬ್ಬ ಭಾರತೀಯ ಹೆಣ್ಣು ಮದುವೆಯಾಗಲೆಂದೇ ಹುಟ್ಟಿದವಳಲ್ಲ. ಒಬ್ಬನ ಸೇವೆ ಮಾಡುವ ಬದಲು, ಇಡೀ ಸಮಾಜದ ಸೇವೆಗಾಗಿ ತಮ್ಮನ್ನು ಮುಡಿಪಾಗಿಟ್ಟುಕೊಳ್ಳಿ, ದರಿದ್ರರು ಹಾಗೂ ನತದೃಷ್ಟರ ಸೇವೆ ಮಾಡುವ ಮೂಲಕ ಮಹಿಳೆಯರು 'ಕರುಣೆಯ ಸೋದರಿ'ಯರಾಗಬೇಕೆಂದು ಗಾಂಧೀಜಿ ಆಶಿಸಿದರು. ಮಹಿಳೆಯರು ತಮ್ಮ ಬಿಡುಗಡೆಯ ಹೋರಾಟವನ್ನು ಇನ್ನಿತರ ಶೋಷಿತರ ಹೋರಾಟದೊಂದಿಗೆ ಸಮನ್ವಯಗೊಂಡು ಸಮಾನ ಉದ್ದೇಶಗಳಿಗಾಗಿ ಹೋರಾಡಬೇಕೆಂದು ಕರೆ ನೀಡಿದರು"[೨೯].

ಹೆಣ್ಣು ಮಕ್ಕಳಿಗೆ ನೀಡಬೇಕಾದ ಶಿಕ್ಷಣದ ಕುರಿತು ಮಹಾತ್ಮಾಗಾಂಧೀಜಿಯವರ ವಿಚಾರಗಳು ಹೀಗಿವೆ 'ಹೆಣ್ಣು ಮಕ್ಕಳ ಯೋಗ್ಯ ಶಿಕ್ಷಣದಲ್ಲಿ ನನಗೆ ವಿಶ್ವಾಸವಿದೆ. ಆದರೆ ಪುರುಷರನ್ನು ನಕಲು ಮಾಡುವುದರಿಂದ ಸ್ತ್ರೀ ಜಗತ್ತಿಗೆ ತನ್ನದೇ ಆದ ಯಾವ ಕೊಡುಗೆಯನ್ನು ನೀಡಲಾರಳು. ಸ್ತ್ರೀ ಪುರುಷರಿಬ್ಬರ ಶಿಕ್ಷಣಗಳು ಒಂದೇ ರೀತಿಯಲ್ಲಿರಬೇಕೆಂದಿಲ್ಲ. ಮನೆಯ ಜೀವನ ಮಹಿಳೆಯರಿಗೆ ಮೀಸಲಾಗಿದೆ. ಮಾನವ ಕುಲದ ಮಕ್ಕಳನ್ನು ಪೋಷಿಸುವ ಕಲೆ ಅವಳ ಸ್ವಾಮ್ಯ. ಆದ್ದರಿಂದ

ಗೃಹಕೃತ್ಯದ ವಿಷಯದಲ್ಲಿ ಮಕ್ಕಳನ್ನು ಪೋಷಿಸುವಲ್ಲಿ ಅವರಿಗೆ ಶಿಕ್ಷಣ ಕೊಡಿಸುವಲ್ಲಿ ಅವಳಿಗೆ ಹೆಚ್ಚಿನ ಜ್ಞಾನವಿರಬೇಕು. ಈ ಮೂಲಭೂತ ತತ್ವದ ಆಧಾರದ ಮೇಲೆ ಸ್ತ್ರೀ ಶಿಕ್ಷಣವಿರಬೇಕು', 'ಪ್ರೌಢರಾಗುವವರೆಗೆ ಶಿಕ್ಷಣವನ್ನು ಪಡೆಯುತ್ತಾ ಬ್ರಹ್ಮಚರ್ಯ ಪಾಲಿಸಿ ಜ್ಞಾನಿಗಳಾಗಿ ಶಿಕ್ಷಿತ ಮಹಿಳೆಯರಾಗಿ' ಎಂದು ಹೇಳಿದ ಗಾಂಧೀಜಿಯವರು 'ನಿಮ್ಮನ್ನು ನಿಮ್ಮ ತಾಯಿತಂದೆಯವರು ಶಾಲೆಗೆ ಕಳುಹಿಸುವುದು ಬಣ್ಣದ ಬೀಸಣಿಗೆಗಳಾಗಲ್ಲ, ಶಿಕ್ಷಣ ಸಂಸ್ಥೆಯಿಂದ ಹೊರ ಬೀಳುವ ನೀವು ಬರಿಯ ಬಣ್ಣದ ಗೊಂಬೆಗಳಾಗಿ ಜೀವನ ರಂಗದಿಂದ ನಿಷ್ಕ್ರಮಿಸುವುದಾದರೆ ಶಿಕ್ಷಣ ನಿಮಗಾಗಿ ಮಾಡಿದ ಮಹಾ ಪ್ರಯತ್ನಗಳು ಮಹಾಪುರುಷರ ದೇಣಿಗೆಗಳು ಅಲ್ಪ ಪ್ರತಿಫಲವನ್ನಿತ್ತವೆಂದು ಭಾವಿಸುತ್ತೇವೆ. ಪ್ರಬುದ್ಧ ಹುಡುಗಿಯರಾದ ನೀವು ಪ್ರಲೋಭನೆಯನ್ನು ಪ್ರತಿಭಟಿಸಬೇಕು, ಅನಾವಶ್ಯಕವಾದ ಆಭರಣಗಳ ಮೋಹವನ್ನು ತ್ಯಜಿಸಬೇಕು. ಇಂದಿನ ವಿದ್ಯಾರ್ಥಿನಿಯರು ಇದನ್ನು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು. ಆಗ ಖಂಡಿತಾ ಅವರ ಜೀವನ ದುಃಖಮಯವಾಗಲಾರದು' ಎಂದು ಹೇಳಿದ್ದಾರೆ.

ವರದಕ್ಷಿಣೆಯನ್ನು ನಿವಾರಿಸಲು ಸ್ವಯಂ ಹುಡುಗಿಯರು ನಿರ್ಧಾರಕೈಗೊಳ್ಳಲು ಹೀಗೆ ಧೈರ್ಯ ನೀಡುತ್ತಾರೆ. 'ಪ್ರೌಢ ಹುಡುಗಿಯರು ಇಂಥ ಸೆಳೆತಗಳನ್ನು ಪ್ರತಿಭಟಿಸಲು ಸಿದ್ಧರಾಗಬೇಕು. ಇಂಥ ಅನಿಷ್ಟ ರೂಢಿಯನ್ನು ನೀವು ಪ್ರತಿಭಟಿಸಲು ಪ್ರಾರಂಭಿಸಿದರೆ ಕೆಲವರು ಆಜೀವ ಪರ್ಯಂತವೂ ಅವಿವಾಹಿತರಾಗಿಯೇ ಉಳಿಯಬಹುದು. ನೀವು ಹೀಗೆಯೇ ಕನ್ಯೆಯಾಗಿ ಇರಲು ಪ್ರಾರಂಭಿಸಿದರೆ ನಿಮ್ಮ ವಿವಾಹ ಕಾಲವು ಪ್ರಾಪ್ತವಾದಾಗ ಅಥವಾ ನಿಮ್ಮ ಜೀವನ ಸಂಗಾತಿಯನ್ನು ಪಡೆಯಬೇಕೆನಿಸಿದಾಗ ನೀವು ವರನ ಹಣ, ಕೀರ್ತಿ, ರೂಪ ಇವುಗಳ ಬಗ್ಗೆ ಹಾತೊರೆಯುವುದಿಲ್ಲ. ತನ್ನ ಅನುಪಮ ಗುಣಗಳಿಂದ ಚಾರಿತ್ರ್ಯವಂಥನಾಗುವಂಥ ವರನನ್ನು ಆರಿಸಿಕೊಳ್ಳುವಿರಿ'.

ಹೆಣ್ಣು ಉದ್ಯೋಗಿಯಾಗಬೇಕೆ? ಮನೆಯಿಂದ ಹೊರ ಹೋಗಿ ದುಡಿಯಬೇಕೆ? ಎಂಬ ಪ್ರಶ್ನೆಗೆ ಗಾಂಧೀಜಿಯವರು ಹೀಗೆ ಹೇಳುತ್ತಾರೆ. "ಹೆಣ್ಣಿನ ಚೇತನ ಶಕ್ತಿಯೆಲ್ಲವೂ ಮಕ್ಕಳನ್ನು ಪೋಷಿಸುವಲ್ಲಿ ಹಾಗೂ ಮನೆಯನ್ನು ನಡೆಸಿಕೊಂಡು ಹೋಗುವಲ್ಲಿ ಬೇಕೇಬೇಕಾಗುತ್ತದೆ. ಸುಸಂಘಟಿತ ಸಮಾಜದಲ್ಲಿ ಸಂಸಾರವನ್ನು ಸಲಹುವ ಭಾರ ಅವಳ ಮೇಲೆ ಎಂದಿಗೂ ಬೀಳಬಾರದು. ಹೆಣ್ಣು ಮನೆಯ ವ್ಯವಸ್ಥೆಯನ್ನು ನಿರ್ವಹಿಸಬೇಕು ಮುಂದುವರಿಯುತ್ತಾ ಲಕ್ಷಾವಧಿ ಮಕ್ಕಳು ಒಲೆಯನ್ನು ಬಿಟ್ಟು ಹೊಟ್ಟೆಯಪಾಡಿಗಾಗಿ ದುಡಿಯುವುದು ತಪ್ಪಾದರೂ ಕೋವಿಯನ್ನು ಹೊತ್ತು ರಕ್ಷಿಸುವಷ್ಟು ತಪ್ಪಾಗಲಿಕ್ಕಿಲ್ಲ" ಎನ್ನುತ್ತಾರೆ. ಸ್ತ್ರೀಪುರುಷರ ಸಮಾನತೆಯನ್ನು ಹೇಳುತ್ತಾ "ಪುರುಷನ ಒಡನಾಡಿಯಾದ ಸ್ತ್ರೀ ಪುರುಷನಷ್ಟೇ ಬುದ್ಧಿಶಾಲಿ ಅವಳಿಗೆ ಪುರುಷನ ಪ್ರತಿ ಕಾರ್ಯದಲ್ಲಿಯೂ ಪ್ರವೇಶಿಸುವ ಹಕ್ಕಿದೆಯಲ್ಲದೆ ಅವಳಿಗೆ ಅವನಷ್ಟೇ ಸ್ವಾತಂತ್ರ್ಯ ಅಧಿಕಾರಗಳು ಹಾಗೂ ಸಮಾನತೆಗಳಿರುತ್ತವೆ. ಗಂಡಸಿಗಿದ್ದಂತೆ ಹೆಂಗಸಿಗೂ ಅವಳ ಕಾರ್ಯರಂಗದಲ್ಲಿ ಹಿರಿದಾದ ಸ್ಥಾನವಿದೆ. ಹೆಣ್ಣು ಗಂಡು ಸ್ಥಾನಮಾನಗಳು ಒಂದೇ ಆದರೂ ಏಕರೂಪವಲ್ಲ. ಅವರು ಅನುಪಮ ಜೊತೆಗಾರರಾಗಿರುವುದರಿಂದ ಒಬ್ಬರನ್ನೊಬ್ಬರು ಉಪಚರಿಸುತ್ತಾರೆ. ಒಬ್ಬರಿಗೊಬ್ಬರು ಸಹಾಯ ಮಾಡುತ್ತಾರೆ. ಅಂತಲೇ ಒಬ್ಬರಿಲ್ಲದೆ ಇನ್ನೊಬ್ಬರ ಅಸ್ತಿತ್ವವನ್ನು ಗುರುತಿಸುವುದು ದುಸ್ತರವಾದುದು ಹೆಣ್ಣು ಗಂಡುಗಳಲ್ಲಿರುವ ಸಮಾನತೆ ಅವರ ವೃತ್ತಿಗಳಲ್ಲಿರಬೇಕೆಂದಿಲ್ಲ. ನಿಸರ್ಗವು ಹೆಣ್ಣು ಗಂಡುಗಳನ್ನು ಒಂದಕ್ಕೊಂದು ಸಹಾಯ ಮಾಡಲು ಹುಟ್ಟಿಸಿದೆ. ಅದು ಅವರ ನಿಸರ್ಗದತ್ತ ರೂಪಕ್ಕೆ ಅನುಗುಣವಾಗಿ ಅವರವರ ಕಾರ್ಯಗಳನ್ನು ವಿಭಜಿಸಿದೆ. ಹೆಣ್ಣು ಮಕ್ಕಳಿಗೆ ಹಕ್ಕುಗಳಿರಲೇಬೇಕು, ಪುರುಷನಿಗಿಲ್ಲದ ಕಾನೂನಿನ ಬಂಧನ ಹೆಣ್ಣಿಗೂ ಇರಬಾರದು. ಮಗನಂತೆ ಮಗಳನ್ನೂ ಒಂದೇ ದೃಷ್ಟಿಯಿಂದ ಕಾಣಬೇಕು" ಎಂಬುದಾಗಿ ಗಾಂಧೀಜಿಯವರು ಜನತೆಗೆ ಹೇಳಿದರು. "ಸ್ತ್ರೀಯರನ್ನು ದುರ್ಬಲರೆಂದು ಕರೆಯುವುದು ನಿಂದನಾಸ್ಪದವಾದುದು ಬಲವನ್ನು ಪಶುಬಲವೆಂದು ಅರ್ಥಮಾಡಿದರೆ ನಿಜಕ್ಕೂ ಸ್ತ್ರೀಯರು ಪಶು ಸಾಮರ್ಥ್ಯದಲ್ಲಿ ನಿರ್ಬಲರು. ಆದರೆ ಈ ಬಲವನ್ನು ನೈತಿಕ ಬಲವೆಂದು ಭಾವಿಸಿದರೆ ಹೆಣ್ಣು ಮಕ್ಕಳು ಗಂಡಸರಿಗಿಂತಲೂ ಆ ಶಕ್ತಿಯಲ್ಲಿ ಸಾವಿರ ಪಾಲು ಸಮರ್ಥರು".[೩೦] ಹೀಗೆ ಗಾಂಧೀಜಿ

ಮಹಿಳೆಯರನ್ನು ಸಹನೆ, ಸಹಿಷ್ಣುತೆ, ತ್ಯಾಗಗಳ ಸಾಕಾರ ಮೂರ್ತಿಯಾಗಿ ಕಂಡು ಭಾರತೀಯ ಸಂಸ್ಕೃತಿಯ ಉಳಿವಿನ ಹೊಣೆಯನ್ನು ಅವಳಿಗೆ ಹೊರಿಸಿದ್ದಾರೆ. "ಹೆಣ್ಣು ಗಂಡಿಗಿಂತಲೂ ಉದಾರಳು. ಏಕೆಂದರೆ ಇಂದಿಗೂ ಹೆಣ್ಣು ತ್ಯಾಗದ, ಮೂಕ ವೇದನೆಯ, ನಮ್ರತೆಯ ನಂಬಿಕೆಯ ಹಾಗೂ ಜ್ಞಾನದ ಪ್ರತೀಕವಾಗಿದ್ದಾಳೆ. ಆಕೆ ಸ್ವಾರ್ಥ ತ್ಯಾಗದ ಸಾಕ್ಷಾತ್ಕಾರವೆಂದು ತಿಳಿದಿದ್ದೇನೆ. ಸ್ತ್ರೀಯರು ಜೀವನದಲ್ಲಿ ಯಾವುದು ಪವಿತ್ರ ಯಾವುದು ಧಾರ್ಮಿಕ ಎಂಬುದಿದೆಯೋ ಅದೆಲ್ಲದರ ರಕ್ಷಕರು. ಅವರು ಸನಾತನ ವಿಚಾರಿಗಳು. ಆದುದರಿಂದ ಅವರಿಗೆ ಮೂಢನಂಬಿಕೆಗಳನ್ನು ಬಿಡಲು ಸಮಯಾವಕಾಶಬೇಕು. ಹಾಗೆಯೇ ಪವಿತ್ರ ಉದಾರವಾದವುಗಳನ್ನು ಬಿಡಲೂ ಸಮಯಬೇಕು." ಮುಂದುವರಿಯುತ್ತಾ "ಭಾರತದ ಉದ್ಧಾರ ಸ್ತ್ರೀಯರ ತ್ಯಾಗ ಮತ್ತು ತಿಳುವಳಿಕೆಗಳನ್ನು ಅವಲಂಬಿಸಿದೆ." ಎಂದು ಗಾಂಧೀಜಿಯವರು ಹೇಳುತ್ತಾರೆ.

ಗಾಂಧೀಜಿಯವರು ಈ ಎಲ್ಲಾ ಮಾತುಗಳನ್ನು ಅರ್ಥಮಾಡಿಕೊಂಡು ಮಂಗಳೂರಿನ ಮಹಿಳೆಯರು ರಾಷ್ಟ್ರೀಯ ಚಳುವಳಿಗಳಲ್ಲಿ ಸಕ್ರೀಯವಾಗಿ ಪಾಲ್ಗೊಂಡರು. ಮದ್ಯಪಾನ ನಿಷೇಧ, ಖಾದಿ ಪ್ರಚಾರ, ಸ್ವದೇಶಿ ಚಳವಳಿ, ಸತ್ಯಾಗ್ರಹಗಳಲ್ಲಾಗಲಿ, ಅಸಹಕಾರ ಚಳುವಳಿಯಾಗಲಿ, ಕಾನೂನುಭಂಗ ಚಳುವಳಿಯಾಗಲೀ ಎಲ್ಲಾ ಚಳುವಳಿಗಳಲ್ಲೂ ಕರಾವಳಿಯ ಸ್ತ್ರೀಯರು ಪುರುಷರೊಂದಿಗೆ ಭುಜಕ್ಕೆ ಭುಜಕೊಟ್ಟು ಹೋರಾಟ ನಡೆಸಿ ತಮ್ಮ ಚಟುವಟಿಕೆಯ ಕ್ಷೇತ್ರವನ್ನು ವಿಸ್ತರಿಸಿಕೊಂಡರು. ತಮ್ಮ ಸಮಸ್ಯೆಗಳಿಗೆ ಪರಿಹಾರಗಳನ್ನು ತಮ್ಮದೇ ಆದ ಸಂಸ್ಥೆಗಳನ್ನು ಸ್ಥಾಪಿಸಿದರೆ ಮಾತ್ರ ಸಾಧ್ಯವೆಂದು ಮನಗಂಡು ಮಹಿಳೆಯರೆಲ್ಲರೂ ಸಂಘಟಿತರಾಗಿ ಬೇರೆ ಬೇರೆ ಸಂಘಸಂಸ್ಥೆಗಳನ್ನು ಸ್ಥಾಪಿಸಲು ಗಾಂಧೀಜಿಯವರು ಪ್ರಭಾವ ಬೀರಿದ್ದಾರೆ. ಕರಾವಳಿಯ ಆರಂಭದ ಮಹಿಳಾ ಸಂಸ್ಥೆಗಳೆಲ್ಲವೂ ಪುರುಷರ ಯಜಮಾನಿಕೆಯಲ್ಲಿಯೇ ನಡೆಯುತ್ತಿದ್ದವು. ಹಾಗಾಗಿ ಆ ಪುರುಷ ಸುಧಾರಕರ ಕಲ್ಪನೆಗಳಿಗೆ ಅನುಗುಣವಾಗಿ ಸಂಸ್ಥೆಗಳು ಯೋಜನೆಗಳು ರೂಪು ತಳೆಯುತ್ತಿದ್ದವು. ಈ ಕಾರಣದಿಂದಾಗಿಯೇ ಕರಾವಳಿಯಲ್ಲಿ ಹಲವಾರು ಮಹಿಳಾ ಸಂಘಟನೆ, ಸಾಹಿತ್ಯ ಸಂಘಗಳು ಹುಟ್ಟಿಕೊಂಡಿತು.

## ಸಂದರ್ಭ ಸೂಚಿ


೧. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬. ಪುಟ ಸಂಖ್ಯೆ ೪೮೨

೨. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧'

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬, ಪುಟುಸಂಖ್ಯೆ : ೪೮೩

೩. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬, ಪುಟುಸಂಖ್ಯೆ : ೪೮೯

೪. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧'

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬, ಪುಟುಸಂಖ್ಯೆ : ೫೦೮

೫. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧'

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬, ಪುಟುಸಂಖ್ಯೆ : ೫೦೯

೬. ಲೋಕಾನಂದ ಆರ್ಯ : 'ಮಂಗಳೂರು ದರ್ಶನ ಸಂಪುಟ -೧, ಮಂಗಳೂರು

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು ೨೦೧೬, ಪುಟ ಸಂಖ್ಯೆ : ೪೮೫

೭. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧'

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು ೨೦೧೬, ಪುಟ ಸಂಖ್ಯೆ : ೪೯೭

೮. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧'

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು ೨೦೧೬, ಪುಟ ಸಂಖ್ಯೆ : ೪೯೮

೯. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧'

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬, ಪುಟ ಸಂಖ್ಯೆ : ೫೦೩

೧೦. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ-೧'

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬, ಪುಟ ಸಂಖ್ಯೆ : ೫೦೫

೧೧. ಬಿ. ಎ. ವಿವೇಕ ರೈ (ಪ್ರ. ಸಂಪಾದಕರು) : 'ಮಂಗಳೂರು ದರ್ಶನ ಸಂಪುಟ–೧'

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬, ಪುಟ ಸಂಖ್ಯೆ : ೫೨೨

೧೨. ವಾಲ್ಟರ್ ಜೆ. ಮಾಬೆನ್ : 'ಮಂಗಳೂರು ದರ್ಶನ ಸಂಪುಟ–೨'

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೪೧೪

೧೩. ಸತ್ಯನಾರಾಯಣ ಮಲ್ಲಿಪಟ್ಟಣ : 'ಮಂಗಳೂರು ದರ್ಶನ ಸಂಪುಟ–೨

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೪೧೯

೧೪. ಸತ್ಯನಾರಾಯಣ ಮಲ್ಲಿಪಟ್ಟಣ : 'ಮಂಗಳೂರು ದರ್ಶನ ಸಂಪುಟ–೨

ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು –೨೦೧೬ ಪುಟ ಸಂಖ್ಯೆ : ೪೨೧

೧೫. ಸತ್ಯನಾರಾಯಣ ಮಲ್ಲಿಪಟ್ಟಣ : 'ಮಂಗಳೂರು ದರ್ಶನ ಸಂಪುಟ–೨

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ೨೦೧೬ ಪುಟ ಸಂಖ್ಯೆ : ೪೨೧

೧೬. ಸತ್ಯನಾರಾಯಣ ಮಲ್ಲಿಪಟ್ಟಣ : 'ಮಂಗಳೂರು ದರ್ಶನ ಸಂಪುಟ–೨

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ೨೦೧೬ ಪುಟ ಸಂಖ್ಯೆ : ೪೨೧

೧೭. ಫಾದರ್ ಪ್ರಶಾಂತ್ ಮಾಡ್ತಾ : 'ಮಂಗಳೂರು ದರ್ಶನ ಸಂಪುಟ–೨',

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ೨೦೧೬, ಪುಟಟ ಸಂಖ್ಯೆ : ೪೮೧

೧೮. ಚಂದ್ರಕಲಾ ನಂದಾವರ : 'ಮಂಗಳೂರು ದರ್ಶನ ಸಂಪುಟ–೨

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು–೨೦೧೬ ಪುಟ ಸಂಖ್ಯೆ : ೫೦೩

೧೯. ಹೆಚ್. ರಾಘವೇಂದ್ರ ರಾವ್ : 'ಮಂಗಳೂರು ದರ್ಶನ ಸಂಪುಟ –೨'

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ೨೦೧೬ ಪುಟ ಸಂಖ್ಯೆ : ೫೨೩

೨೦. ಸಿ. ನಿರ್ಮಲ ಫ್ರಾನ್ಸಿಸ್ ಎ.ಸಿ.. ಡಾ। ಎ.ಶಶಿಕಲಾ: 'ಮಂಗಳೂರು ದರ್ಶನ ಸಂಪುಟ–೨

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೩೯

೨೧. ಸಿ. ನಿರ್ಮಲ ಫ್ರಾನ್ಸಿಸ್ ಎ.ಸಿ, ಡಾ। ಎ. ಶಶಿಕಲಾ ; ' ಮಂಗಳೂರು ದರ್ಶನ ಸಂಪುಟ–೨'

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೪೭

೨೨. ಸಿ. ನಿರ್ಮಲ ಫ್ರಾನ್ಸಿಸ್ ಎ.ಸಿ, ಡಾ। ಎ. ಶಶಿಕಲಾ ; ' ಮಂಗಳೂರು ದರ್ಶನ ಸಂಪುಟ–೨'

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೫೦

೨೩. ಸಿ. ನಿರ್ಮಲ ಪ್ರಾನ್ಸಿಸ್ ಎ.ಸಿ, ಡಾ। ಎ. ಶಶಿಕಲಾ ; ‘ ಮಂಗಳೂರು ದರ್ಶನ ಸಂಪುಟ–೨’

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೫೧

೨೪. ಸುಶೀಲಾ ಆರ್. ರಾವ್ ; ‘ಮಂಗಳೂರು ದರ್ಶನ ಸಂಪುಟ–೨’

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೭೭

೨೫. ಸುಶೀಲಾ ಆರ್. ರಾವ್ ; ‘ಮಂಗಳೂರು ದರ್ಶನ ಸಂಪುಟ–೨’

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೭೮

೨೬. ಸುಶೀಲಾ ಆರ್. ರಾವ್ ; ‘ಮಂಗಳೂರು ದರ್ಶನ ಸಂಪುಟ–೨’

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೮೦

೨೭. ಸುಶೀಲಾ ಆರ್. ರಾವ್ ; ‘ಮಂಗಳೂರು ದರ್ಶನ ಸಂಪುಟ–೨’

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೮೦

೨೮. ಸುಶೀಲಾ ಆರ್. ರಾವ್ ; ‘ಮಂಗಳೂರು ದರ್ಶನ ಸಂಪುಟ–೨’

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಮಂಗಳೂರು, ೨೦೧೬ ಪುಟ ಸಂಖ್ಯೆ : ೫೮೩

೨೯. ಎನ್. ಗಾಯತ್ರಿ : ‘ಮಹಿಳೆ ಬಿಡುಗಡೆಯ ಹಾದಿಯ’

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್ : ೧೯೯೧ ಪುಟಸಂಖ್ಯೆ :

೩೦. ಚಂದ್ರಕಲಾ ನಂದಾವರ : ‘ಹೊಸ್ತಿಲಿಂದೀಚೆಗೆ’

ಹೇಮಾಂಶ ಪ್ರಕಾಶನ ಮಂಗಳೂರು : ೧೯೯೧ ಪುಟ ಸಂಖ್ಯೆ: ೪೭

# ೩. ಕರಾವಳಿ ಲೇಖಕಿಯರ ವಾಚಕಿಯರ ಸಂಘದ ಹುಟ್ಟು ಬೆಳವಣಿಗೆ

೩.೧. ಪ್ರವೇಶ

೩.೨. ಲೇಖಕಿಯರ ಮತ್ತು ವಾಚಕಿಯರ ಸಂಘ ಜನ್ಮತಾಳಲು ಪ್ರೇರಣೆಯಾದ ಅಂಶಗಳು

೩. ೩. ಲೇಖಕಿಯರ ವಾಚಕಿಯರ ಸಂಘ ಬೆಳೆದು ಬಂದ ದಾರಿ

## ೩.೧. ಪ್ರವೇಶ:

ನಮ್ಮ ಸಮಾಜದಲ್ಲಿ ಮಹಿಳೆಯರೇ ನಡೆಸಿಕೊಂಡು ಬರುವ ಹಲವು ಸಂಘ ಸಂಸ್ಥೆಗಳಿವೆ. ಮಹಿಳೆಯರಿಗೆ ಏಕೆ ಪ್ರತ್ಯೇಕ ಸಂಘ ಸಂಸ್ಥೆಗಳು ಎಂದು ಕೇಳುವ ದಿನಗಳು ಕಳೆದಿವೆ. ಆದರೂ "ಮಗು ಹಸಿವೆಯಾದಾಗ ಅಳದೆ ಇದ್ದರೆ ಬಹುಶಃ ತಾಯಿಯೂ ಅದರ ಹಸಿವೆಯನ್ನು ಇಂಗಿಸಲು ಮರೆತು ಬಿಟ್ಟಾಳು! ನಮ್ಮ ಸಮಾಜವೂ ಅಷ್ಟೆ ನಿಮಗೆ ಏನಾದರೂ ಬೇಕಾಗಿದೆಯೋ ನೀವೇ ಕೇಳಬೇಕು ! ಇಲ್ಲವಾದರೆ ಮಹಿಳೆಯರಿಗೊಂದು ಅಸ್ತಿತ್ವ ಇದೆ ಎನ್ನುವುದನ್ನೂ ಸಮಾಜ ಹಿಂದಿನಂತೆ ಮರೆತು ಬಿಟ್ಟೀತು ಜೋಕೆ !"[೧] ಎಂದು ಖ್ಯಾತ ಲೇಖಕಿ ಮನೋರಮಾ ಎಂ. ಭಟ್‌ರವರು ಮಹಿಳೆಯರ ಸಂಘಸಂಸ್ಥೆಗಳ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ನೂರಾರು ವರ್ಷಗಳ ಹಿಂದೆ ಸಬಲರು ದುರ್ಬಲರನ್ನು ಮನಬಂದಂತೆ ನಡೆಸಿಕೊಂಡಿದ್ದಾರೆ. ಈಗ ದುರ್ಬಲರು ಎಚ್ಚೆತ್ತು ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಪ್ರಜ್ಞಾವಂತರಾಗಿದ್ದು ಅವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಸಂಘಟಿತರಾಗಿದ್ದಾರೆ. ಇದೇ ಮನೋಭಾವ ಮಹಿಳೆಯರೂ ಸಂಘಸಂಸ್ಥೆಗಳನ್ನು ಕಟ್ಟಿಕೊಳ್ಳಲು ಕಾರಣವೆಂದು ಹೇಳಬಹುದಾಗಿದೆ.

ಹೆಣ್ಣು ಮಕ್ಕಳು ಮನೆ ಹೊರಗೆ ಕಾಲಿಡಲೂ ಹೆದರುವ ಕಾಲದಲ್ಲಿ ಕ್ರಿ.ಶ.೧೯೧೧ರ ಕಾಲಘಟ್ಟದ ಮಂಗಳೂರಿನ ಬೆರಳೆಣಿಕೆಯ ವಿದ್ಯಾವಂತ ಆಧುನಿಕ ಮನೋಭಾವ ಮಹಿಳೆಯರು ಸೇರಿಕೊಂಡು 'ಮಹಿಳಾ ಸಭಾ' ಎಂಬ ಹೆಸರಿನ ಸಂಘ ಸ್ಥಾಪಿಸಿ ಗೃಹಿಣಿಯರಿಗೆ ಮನೆಯಿಂದ ಹೊರಗೆ ಬರಲು ಅವಕಾಶ ಕಲ್ಪಿಸಿಕೊಟ್ಟಿತ್ತು. ಇದರ ಸ್ಥಾಪಕ ಸದಸ್ಯರು ಹೆಣ್ಣು ಮಕ್ಕಳಿಗೆ ಕಡ್ಡಾಯ ಶಿಕ್ಷಣ ನೀಡಬೇಕೆಂದು ಆಂದೋಲನ ಮಾಡುವ ಮೂಲಕ ಮಹಿಳೆಯರನ್ನು ಪ್ರಜ್ಞಾವಂತರನ್ನಾಗಿ ಮಾಡಲು ಸಾಕಷ್ಟು ಪ್ರಯತ್ನಪಟ್ಟಿದ್ದಾರೆ ಎಂಬುದನ್ನು ಸ್ಮರಿಸಿಕೊಳ್ಳಬಹುದು.

ಮಂಗಳೂರಿನ ಮಹಿಳೆಯರಿಗೆ ಲೋಕಜ್ಞಾನವನ್ನು ಒದಗಿಸಿದ್ದು ಮೊತ್ತ ಮೊದಲ ಬಾರಿಗೆ ಮಹಿಳಾ ಸಭಾದ ಮೂಲಕವೇ ಎಂದು ಹೇಳಿದರೆ ತಪ್ಪಾಗಲಾರದು. ಮಹಿಳೆಯರಿಗೆ ಮನೋರಂಜನೆ ದೇಹಾರೋಗ್ಯಕ್ಕಾಗಿ ಆಟೋಟಗಳು ಅಗತ್ಯವಿದೆ. ಒಟ್ಟಿನಲ್ಲಿ ಸಮಾಜ ಅಂದು ಪುರುಷನಿಗೆ ಯಾವ ಸೌಲಭ್ಯಗಳನ್ನೆಲ್ಲಾ ಕೊಡುತ್ತಿತ್ತೋ ಅವುಗಳು ಸ್ತ್ರೀಯರಿಗೂ ಸಿಗಬೇಕು ಎನ್ನುವ ಪ್ರಯತ್ನ ಮಹಿಳಾ ಸಭಾ ಮಾಡಿತ್ತು. "ಅಂದಿನ ಸೋದರಿಯರ ಪ್ರಯತ್ನಗಳ ಫಲವನ್ನೇ ಇಂದಿನ ಮಹಿಳೆಯರು ಉಣ್ಣುತ್ತಿದ್ದಾರೆ ! ಆದ್ದರಿಂದ ಸ್ಥಾಪಕ ಸದಸ್ಯೆಯರಿಗೆ ನಾವು ಋಣಿಗಳು."[೨] ಎಂದು ಮನೋರಮಾ ಎಂ. ಭಟ್ ಮಹಿಳಾ ಸಭಾದ ಸ್ಥಾಪಕ ಸದಸ್ಯೆಯರನ್ನು ಸ್ಮರಿಸಿಕೊಳ್ಳುತ್ತಾರೆ.

"ಕುಟುಂಬದಲ್ಲಿ ಮಗಳಾಗಿ, ಪತ್ನಿಯಾಗಿ, ತಾಯಿಯಾಗಿ ಮಹಿಳೆ ನಿರ್ವಹಿಸುವ ಪಾತ್ರಕ್ಕೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಇಂತಹ ಮಹಿಳೆ ಒಂದು ಕಾಲದಲ್ಲಿ ಅಡುಗೆ ಮನೆಯೇ ತನ್ನ ಪ್ರಪಂಚವೆಂದು ತಿಳಿದರೂ ಬಿಡುವಿನ ವೇಳೆ ಬರವಣಿಗೆಯಲ್ಲಿ ತೊಡಗುತ್ತಾಳೆ. ಆದರೆ ಆಕೆಗೆಯೇ ತಿಳಿಯದು ತಾನು ಬರೆದ ಬರವಣಿಗೆ ಒಂದು ಕಾವ್ಯವಾಗಿದೆ, ಕವಿತೆಯಾಗಿದೆ ಅದು ಶ್ರೇಷ್ಠವಾಗಿದೆ ಎಂದು. ಅಂತಹ ಸಂದರ್ಭದಲ್ಲಿ ವಿವಿಧ ಸಾಹಿತ್ಯ ಪ್ರಕಾರಗಳ ಬಗ್ಗೆ ಅರಿವು ಮೂಡಿಸಿದ್ದು ಸಾಹಿತ್ಯ ಸಂಘಟನೆಗಳು."[೩] ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ ಖ್ಯಾತ ಲೇಖಕಿ ಬಿ.ಎಂ. ರೋಹಿಣಿಯವರು. ಸಾಹಿತ್ಯ ಪರವಾದ ಸಂಘಗಳು ಹುಟ್ಟಿಕೊಂಡ ಕಾಲದಲ್ಲಿ ಸ್ತ್ರೀ ಪುರುಷರನ್ನೊಳಗೊಂಡ ಸಂಘಗಳಲ್ಲಿ ಸ್ತ್ರೀಯರಿಗೆ ಪುರುಷರಿಗಿರುವಷ್ಟೇ ಸ್ಥಾನಮಾನ ಇರಲಿಲ. ಮಹಿಳೆಯರ ಸಾಹಿತ್ಯ ಕೃತಿಗಳಿಗೆ ಪುರುಷರಷ್ಟು ಮನ್ನಣೆ ದೊರಕುತ್ತಿರಲಿಲ್ಲ. ವಿಮರ್ಶೆ ಮಾಡುತ್ತಿರಲಿಲ್ಲ. ಮಹಿಳೆಯರಿಗೆ ವೇದಿಕೆಯೂ ಲಭ್ಯವಾಗುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಮಹಿಳಾ ಸಾಹಿತ್ಯ ಗಟ್ಟಿಯಾಗಿ ನೆಲೆಯೂರಬೇಕು ಮತ್ತು ಮಹಿಳಾ ಸಾಹಿತ್ಯ

ಚರಿತ್ರೆ ರಚನೆಯಾಗಬೇಕು. ಎಂಬೆಲ್ಲಾ ಕಾರಣಕ್ಕಾಗಿ ಮಹಿಳಾ ಸಾಹಿತ್ಯ ಸಂಘಗಳು ಹುಟ್ಟಿಕೊಳ್ಳುವುದು ಮಹಿಳೆಯರಿಗೆ ಅನಿವಾರ್ಯವಾಗಿತ್ತು. ಹೀಗೆ ಮೊತ್ತ ಮೊದಲು ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರಿನಲ್ಲಿ ಹುಟ್ಟಿಕೊಂಡಿತ್ತು. ಈ ಸಂಘದ ಪ್ರೇರಣೆಯಿಂದ ಬೇರೆ ಬೇರೆ ಸಾಹಿತ್ಯ ಪರ ಮಹಿಳಾ ಸಂಘಟನೆಗಳು ಹುಟ್ಟಿಕೊಂಡಿತ್ತು. ಹೀಗೆ ಹುಟ್ಟಿ ಬೆಳೆದ ಸಂಘಗಳಲ್ಲಿ ಲೇಖಕಿಯರೂ ಮತ್ತು ವಾಚಕಿಯರನ್ನೊಳಗೊಂಡ ಮೊತ್ತ ಮೊದಲ ಸಂಘಟನೆ ಕರಾವಳಿಯಲ್ಲಿ ಲೇಖಕಿಯರ ವಾಚಕಿಯರ ಸಂಘ ಹುಟ್ಟಿಕೊಂಡಿತ್ತು.

## ೩.೨.ಲೇಖಕಿಯರ ಮತ್ತು ವಾಚಕಿಯರ ಸಂಘ ಜನ್ಮ ತಾಳಲು ಪ್ರೇರಣೆಯಾದ ಅಂಶಗಳು:

೧೯೭೫ರಿಂದ ೮೫ರವರೆಗಿನ ಅಂತಾರಾಷ್ಟ್ರೀಯ ಮಹಿಳಾ ದಶಕದ ಅವಧಿಯಲ್ಲಿ ಲೇಖಕಿಯರಿಗೊಂದು ಪ್ರತ್ಯೇಕ ವೇದಿಕೆ ಬೇಕು ಎಂಬ ಅಗತ್ಯವನ್ನು ಮನಗಂಡು ಕೆಲವು ಹಿರಿಯ ಲೇಖಕಿಯರು ಒಟ್ಟು ಸೇರಿದರು. ಅಂದಿನ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಅವರ ಸಲಹೆ ಹಾಗೂ ಮಾರ್ಗದರ್ಶನದಲ್ಲಿ ೧೯೭೯ರಲ್ಲಿ ಕರ್ನಾಟಕ ಲೇಖಕಿಯರ ಸಂಘವನ್ನು ಪ್ರಾರಂಭಿಸಿದರು. ಸಂಘದ ಮೊದಲ ಅಧ್ಯಕ್ಷರಾಗಿದ್ದವರು ಹೆಸರಾಂತ ಹಾಸ್ಯ ಲೇಖಕಿ ಶ್ರೀಮತಿ ಟಿ. ಸುನಂದಮ್ಮರವರು ಆ ಕಾಲ ಘಟ್ಟದಲ್ಲಿ ಸಾಹಿತ್ಯ ಸಮ್ಮೇಳನ ಮತ್ತು ಸಾಹಿತ್ಯ ಗೋಷ್ಠಿಗಳಲ್ಲಿ ಅಪರೂಪಕ್ಕಷ್ಟೇ ಮಹಿಳಾ ಸಾಹಿತಿಗಳು ಕಾಣಿಸಿಕೊಳ್ಳುತ್ತಿದ್ದ ದಿನಗಳಲ್ಲಿ ಇಂತಹ ಸಂಘಟನೆಯೊಂದು ಅತ್ಯಗತ್ಯವಾಗಿ ತಲೆ ಎತ್ತಲೇಬೇಕಾಗಿತ್ತು. ಈ ಸಂಘ ಹುಟ್ಟಿಕೊಂಡ ಬಳಿಕ ಮಹಿಳೆಯರದೇ ಪ್ರತ್ಯೇಕ ಸಾಹಿತ್ಯಗೋಷ್ಠಿಗಳೂ, ಸಾಹಿತ್ಯ ಸಮ್ಮೇಳನಗಳೂ ನಡೆಯಲಾರಂಭಿಸಿದವು. ಎಲ್ಲೋ ಕ್ಷೀಣವಾಗಿಯಷ್ಟೇ ಕೇಳಿಸುತ್ತಿದ್ದ ಹೆಣ್ಣುಧ್ವನಿ, ಮಹಿಳಾಧ್ವನಿಯಾಗಿ, ಕರ್ನಾಟಕ ಮೂಲೆ ಮೂಲೆಗಳಿಂದಲೂ ಕೇಳಿಸುವಂತಹ ಒಂದು ವಾತಾವರಣ ನಿರ್ಮಾಣವಾದುದು ಲೇಖಕಿಯರ ಸಂಘ ಹುಟ್ಟಿಕೊಂಡ ಬಳಿಕವೆಂದು ಹೇಳಬಹುದಾಗಿದೆ. ಶ್ರೀಮತಿ ಎಚ್.ಎಸ್.ಪಾರ್ವತಿ, ಪದ್ಮಾಗುರುರಾಜ್, ನಾಗಮಣಿ ಎಸ್.ರಾವ್, ಲೀಲಾದೇವಿ ಆರ್. ಪ್ರಸಾದ್. ಹೇಮಲತಾ ಮಹಿಷಿ, ಗೀತಾ ದೇಸಾಯಿ, ಕೆ.ಟಿ. ಬನಶಂಕರಮ್ಮ, ನಿರುಪಮಾ, ಶಾಂತಾನಾಗರಾಜ್, ಉಷಾದೇವಿ ಮುಂತಾದವರ ಪ್ರಯತ್ನದಿಂದಲೇ ಕರ್ನಾಟಕ ಲೇಖಕಿಯರ ಸಂಘ ಜನ್ಮತಾಳಿತು ಎಂದು ಸ್ಮರಿಸಬಹುದಾಗಿದೆ. "ಅಖಿಲ ಕರ್ನಾಟಕ ಲೇಖಕಿಯರ ಸಂಘ ಬೆಂಗಳೂರಿನಲ್ಲಿದ್ದ ಕಾರಣವಾಗಿ ಕರಾವಳಿ ಲೇಖಕಿಯರು ಒಂದೆಡೆ ಸೇರಿ ವಿಚಾರ ವಿನಿಮಯ ನಡೆಸುವ ಸಾಧ್ಯತೆ ತೀರಾ ಕಡಿಮೆಯಾಗಿತ್ತು ಮತ್ತು ಮಂಗಳೂರಿನ ಕನ್ನಡ ಸಂಘದ ಕಾರ್ಯಕ್ರಮಗಳಲ್ಲೇ ಆಗ ಮಹಿಳಾ ಸಾಹಿತಿಗಳು ತೃಪ್ತಿಪಡಬೇಕಾಗಿತ್ತು."[೪] ಎಂಬುದನ್ನು ಖ್ಯಾತ ಲೇಖಕಿ ಶ್ರೀಮತಿ ಚಂದ್ರಕಲಾ ನಂದಾವರರವರು ನೆನಪಿಸಿಕೊಳ್ಳುತ್ತಾರೆ.

ಡಾ। ಹಂಪಾ ನಾಗರಾಜರವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಮೊತ್ತಮೊದಲಿಗೆ ಸಾಹಿತ್ಯ ಪರಿಷತ್ತಿನಿಂದ ಅಖಿಲ ಕರ್ನಾಟಕ ಲೇಖಕಿಯರ ಸಾಹಿತ್ಯ ಸಮ್ಮೇಳನವನ್ನು ಮಾಡುತ್ತಾರೆ. ಇದರ ಮೂರನೇ ಸಮ್ಮೇಳನ ತುಮಕೂರಿನಲ್ಲಿ ೧೯೮೮ರ ಜೂನ್ ಎರಡರಂದು ನಡೆಯುತ್ತದೆ. ಮಹಿಳಾ ಸಹಿತ್ಯ ಸಮ್ಮೇಳನಕ್ಕೆ ಮಂಗಳೂರುನಿಂದ ವಿಶೇಷ ಆಹ್ವಾನಿತರಾಗಿ ಮಂಗಳೂರು ಕನ್ನಡ ಸಂಘದ ಕಾರ್ಯದರ್ಶಿಯಾಗಿ ಹಲವಾರು ವರ್ಷ ಕಾರ್ಯ ನಿರ್ವಹಿಸುತ್ತಿದ್ದ ಶ್ರೀಮತಿ ಚಂದ್ರಕಲಾ ನಂದಾವರ ಮತ್ತು ಶ್ರೀಮತಿ ಸುಮತಿ ಪಾಂಗಾಳರವರು ಸಮ್ಮೇಳನದಲ್ಲಿ ಭಾಗವಹಿಸುತ್ತಾರೆ. ಈ ಸಮ್ಮೇಳನದ ಅಧ್ಯಕ್ಷರಾಗಿದ್ದವರು ಡಾ। ಹಂಪಾ ನಾಗರಾಜ್‌ರವರು ಸಮ್ಮೇಳನವನ್ನು ಉದ್ಘಾಟಿಸಿದರು. ಅಂದಿನ ಕರ್ನಾಟಕ ಸರಕಾರ ಕೈಗಾರಿಕಾ ಸಚಿವ ಶ್ರೀ ಎಸ್. ಆರ್. ಬೊಮ್ಮಾಯಿಯವರು "ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರಿಗೆ ಸಮಾನಾವಕಾಶ

ಕಲ್ಪಿಸುವವರೆಗೆ ಪ್ರತ್ಯೇಕ ಲೇಖಕಿಯರ ಸಮ್ಮೇಳನ ಅವಶ್ಯ ಎಂದು ಸಮರ್ಥಿಸಿ ಬೊಮ್ಮಾಯಿಯವರು ಮಾತಾಡಿದರು. ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯ, ಪುರುಷ ಸಾಹಿತ್ಯ ಎಂಬ ಭೇದ ಇದೆಯೆ? ಸಾಹಿತ್ಯದ ಮೌಲ್ಯ ಮಾಪನದಲ್ಲಿ ಇವೆರಡಕ್ಕೂ ಬೇರೆ ಒರೆಗಲ್ಲು ಇಲ್ಲ. ಆದ್ದರಿಂದ ಮಹಿಳೆಯರಿಗೆ ಅವಕಾಶಗಳಿಲ್ಲದ್ದರಿಂದ ಪ್ರತ್ಯೇಕ ಗೋಷ್ಠಿ ಅವಶ್ಯವಾದರೂ ಸಾಹಿತ್ಯದ ಮೌಲ್ಯ ಮಾಪನದಲ್ಲಿ ಇಂತಹ ಭೇದಕೂಡದು. ಲೇಖಕಿಯರು ಉನ್ನತ ಮಟ್ಟದ ಸಾಹಿತ್ಯ ರಚಿಸುವಂತೆ ವಿಮರ್ಶಕರು ವಸ್ತು ನಿಷ್ಠವಾದ ವಿಮರ್ಶೆಯ ಜೊತೆಗೆ ಗೌರವ ಭಾವನೆಯನ್ನು ಬೆಳೆಸಿಕೊಂಡು ಪ್ರೋತ್ಸಾಹಿಸಬೇಕು."[೫] ಎಂದು ಉದ್ಘಾಟನಾ ಸಮಾರಂಭದಲ್ಲಿ ಹೇಳುತ್ತಾರೆ. ಸಮ್ಮೇಳನಾಧ್ಯಾಕ್ಷರಾದ ಡಾ। ಹಂಪಾ ನಾಗರಾಜರು "ಲೇಖಕಿಯರ ಸಮ್ಮೇಳನವು ಲೇಖಕಿಯರಲ್ಲಿ ಸಂಘಟನೆ ವಿಚಾರವಿನಿಮಯ ಮತ್ತು ಆತ್ಮ ಶೋಧನೆಗೆ ಅವಕಾಶಗಳುನ್ನುಂಟು ಮಾಡುತ್ತವೆ."[೬] ಹೇಳಿದ ಮಾತುಗಳನ್ನು ಖ್ಯಾತ ಲೇಖಕಿ ಚಂದ್ರಕಲಾ ನಂದಾವರ ಸ್ಮರಿಸಿಕೊಳ್ಳುತ್ತಾ, ಈ ವೇಳೆಯಲ್ಲಿ ಮಂಗಳೂರುನಲ್ಲೂ ಲೇಖಕಿಯರ ಸಂಘ ಬೇಕೆನ್ನುವ ಕನಸು ಹುಟ್ಟಿಕೊಂಡ ವಿಚಾರವಾಗಿ ಈ ರೀತಿಯಾಗಿ ಹಂಚಿಕೊಂಡಿದ್ದಾರೆ. "ನಮ್ಮ ಹಾಗೆಯೇ ಬೆಂಗಳೂರು, ಮೈಸೂರು, ಧಾರವಾಡ, ಮುಂಬಯಿಗಳಿಂದ ಲೇಖಕಿಯರು ಈ ಸಮ್ಮೇಳನಕ್ಕೆ ಆಗಮಿಸಿದ್ದರು, ಇಲ್ಲಿ ಹಲವು ಲೇಖಕಿಯರ ಪರಿಚಯವೂ ನಮಗಾಯಿತು. ಬೆಂಗಳೂರಿನಲ್ಲಿ ಕರ್ನಾಟಕ ಲೇಖಕಿಯರ ಸಂಘ ಸ್ಥಾಪನೆಗೊಂಡಿದೆ ಎಂಬ ಮಾಹಿತಿ ನನಗೆ ಇರಲಿಲ್ಲ. ಈ ಸಂಘದವರು ಕರ್ನಾಟಕ ಲೇಖಕಿಯರ ಸಂಘದ ಸದಸ್ಯರಾಗಲು ಸಮ್ಮೇಳನದಲ್ಲಿ ವಿನಂತಿಸಿಕೊಂಡರು ನಾನು ರೂ.೧೧/- ಕೊಟ್ಟು ಸದಸ್ಯೆಯಾದೆ. ನಂತರ ನೀವು ನಿಮ್ಮ ಜಿಲ್ಲೆಗಳಲ್ಲಿ ಲೇಖಕಿಯರ ಸಂಘದ ಘಟಕವಾಗಿ ಮಾಡಬಹುದು ಎಂಬ ಕನಸ್ಸನ್ನು ಬಿತ್ತಿದರು."[೭] ಎಂದು ಹಂಚಿಕೊಂಡಿದ್ದಾರೆ.

ಕರ್ನಾಟಕ ಲೇಖಕಿಯರ ಸಂಘದ ವತಿಯಿಂದ ಬೆಂಗಳೂರಿನಲ್ಲಿ ೧೯೮೫ರಲ್ಲಿ ಎರಡನೇ ಮಹಿಳಾ ಸಾಹಿತ್ಯ ಸಮ್ಮೇಳನ ನಡೆಯುತ್ತದೆ. ಈ ಸಮ್ಮೇಳನಕ್ಕೂ ಖ್ಯಾತ ವಿಶ್ಲೇಷಕಿ ಚಂದ್ರಕಲಾ ನಂದಾವರರನ್ನು ಕವಿಗೋಷ್ಠಿಗಾಗಿ ಆಹ್ವಾನಿಸುತ್ತಾರೆ. ಈ ಸಮ್ಮೇಳನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಿಂದ ಗಂಗಾ ಪಾದೆಕಲ್, ಎ.ಪಿ. ಮಾಲತಿ, ಮೋಹಿನಿ ಮಂಜುನಾಥ ಇವರುಗಳೂ ಆಗಮಿಸಿದ್ದರು. ಗಂಗಾ ಪಾದೆಕಲ್, ಎ.ಪಿ. ಮಾಲತಿಯವರು ಪತ್ರಿಕೆಗಳಲ್ಲಿ ಕಥೆ ಕವನಗಳನ್ನು ಬರೆಯುತ್ತಿದ್ದರಿಂದ ಚಂದ್ರಕಲಾ ನಂದಾವರರವರಿಗೆ ಪರಿಚಯವಿತ್ತು. ಆದರೆ ಮುಖತಃ ಭೇಟಿಯಾಗಿರಲ್ಲಿಲ್ಲ. ಈ ಸಮ್ಮೇಳನನದಲ್ಲಿ ಭೇಟಿಯಾಗಿ ನಮ್ಮ ಜಿಲ್ಲೆಯಲ್ಲೂ ಲೇಖಕಿಯರ ಸಂಘವನ್ನು ಸ್ಥಾಪಿಸುವ ಎಂಬ ಕನಸ್ಸನ್ನು ಬಿತ್ತಿದೆ ಎಂಬುದಾಗಿ ಚಂದ್ರಕಲಾ ನಂದಾವರ ಹೇಳುತ್ತಾರೆ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಅಖಿಲ ಕರ್ನಾಟಕ ಲೇಖಕಿಯರ ನಾಲ್ಕನೇಯ ಸಮ್ಮೇಳನ ೧೯೮೫ ಆಗಸ್ಟ್ ೩, ೪ರಂದು ಮಂಡ್ಯ ಜಿಲ್ಲೆಯಲ್ಲಿ ನಡೆಯುತ್ತದೆ. ಈ ಸಮ್ಮೇಳನಕ್ಕೆ ಉಡುಪಿಯ ಜಾನಕಿ ಬ್ರಹ್ಮಾವರ, ಪದ್ಮಾ ಶೆಣೈ, ಚಂದ್ರಕಲಾ ನಂದಾವರರವರು ಜೊತೆಯಾಗಿ ತೆರಳುತ್ತಾರೆ. ಇಲ್ಲಿಯ ಗೋಷ್ಠಿ ಅಧ್ಯಕ್ಷರಾಗಿ ಪದ್ಮಾಶೆಣೈಯವರಾಗಿದ್ದರು. ಈ ಸಂದರ್ಭದಲ್ಲೂ "ನಾನು ಪದ್ಮಾಶೆಣೈಯವರಲ್ಲಿ ನಮ್ಮ ಜಿಲ್ಲೆಯಲ್ಲೂ ಲೇಖಕಿಯರ ಸಂಘ ಮಾಡುವ"[೮] ಎಂದು ಹೇಳಿದೆ ಎಂಬುದಾಗಿ ಚಂದ್ರಕಲಾರವರು ಹೇಳುತ್ತಾರೆ. ಮುಂದೆ ಆ ವರ್ಷಗಳಲ್ಲಿ ಹೋದಂತಹ ಎಲ್ಲಾ ಕಾರ್ಯ ಕ್ರಮಗಳಲ್ಲೂ ನಮ್ಮ ಜಿಲ್ಲೆಯಲ್ಲೂ ಲೇಖಕಿಯರ ಸಂಘ ಆಗಬೇಕು ಎಂಬುದಾಗಿ ಹೇಳುತ್ತಿದ್ದೆ ಎಂದು ಹೇಳುತ್ತಾರೆ. ಉಡುಪಿಯಲ್ಲಿ ನಡೆಯುವ ಒಂದು ಕಾರ್ಯಕ್ರಮದಲ್ಲಿ ಪತ್ರಿಕೆ, ತರಂಗದ ಬರಹಗಾರ್ತಿಯಾದ ಕಾರ್ಕಳದ ಯು.ಬಿ. ರಾಜಲಕ್ಷ್ಮಿಯವರಿಗೂ ತಿಳಿಸಿದೆ ಎಂದು ಹೇಳುತ್ತಾರೆ. ಕನ್ನಡ ಸಂಘ ಮಂಗಳೂರು ಇದರ ಬೆಳ್ಳಿ ಹಬ್ಬದ ಪ್ರಯುಕ್ತ ಕರ್ನಾಟಕ ಸಾಹಿತ್ಯ ಅಕಾಡೆಮಿಯ ನೆರವಿನಿಂದ ೧೯೮೬ರ ಆಗಸ್ಟ್ ೬ ರಂದು ದಕ್ಷಿಣ ಕನ್ನಡ ಜಿಲ್ಲೆಯ ಮೊತ್ತ ಮೊದಲ ಮಹಿಳಾ ಸಾಹಿತ್ಯ ಸಮ್ಮೇಳನವನ್ನು ಹಮ್ಮಿಕೊಳ್ಳಲಾಗುತ್ತದೆ. ಇದು ದ.ಕ. ಜಿಲ್ಲೆಯ ಇತಿಹಾಸದಲ್ಲಿ ಮೊದಲನೆಯದ್ದಾತ್ತು. ಈ ಸಮ್ಮೇಳನದಲ್ಲಿ ಬೆಂಗಳೂರು ಕರ್ನಾಟಕ ಲೇಖಕಿಯರ ಸಂಘದ ಪದಾಧಿಕಾರಿಗಳಾದ ಶ್ರೀಮತಿ ಎಚ್.ಎಸ್. ಪಾರ್ವತಿ, ನಾಗಮಣಿ ಎಸ್. ರಾವ್ ಶಾಂತಾನಾಗರಾಜ್.

ಪದ್ಮಾಗುರುರಾಜ್. ನಾಗಮಣಿ ಎಸ್. ರಾವ್., ಲೀಲಾದೇವಿ ಆರ್. ಪ್ರಸಾದ್. ಕೆ.ಟಿ. ಬನಶಂಕರಮ್ಮ ಹೀಗೆ ಹಲವಾರು ಮಂದಿ ಲೇಖಕಿಯರು ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ. ನಾರಾಯಣ ಇವರು ಭಾಗವಹಿಸುತ್ತಾರೆ. ಇವರ ಜೊತೆ ಜಿಲ್ಲೆಯ ಹಿರಿಯ ಲೇಖಕಿಯರಾಗಿದ್ದ ಆನಂದಿ ಸದಾಶಿವರಾವ್, ಪದ್ಮಾಶೆಣೈ, ಕಾಸರಗೋಡಿನ ಡಾ। ಲಲಿತಾ ಎಸ್.ಎನ್.ಭಟ್, ಪುತ್ತೂರಿನ ಎ.ಪಿ. ಮಾಲತಿ, ಗಂಗಾ ಪಾದೆಕಲ್, ಬಿ.ಎಂ.ರೋಹಿಣಿ, ಉಡುಪಿಯ ವೈದೇಹಿ, ಜಾನಕಿ ಬ್ರಹ್ಮಾವರ, ಸಾರಾ ಅಬೂಬಕರ್, ಸಬಿಹಾ ಭೂಮಿಗೌಡ, ಸಾವಿತ್ರಿ ಯಂ. ಹೀಗೆ ಹಲವಾರು ಮಂದಿ ಪಾಲ್ಗೊಳ್ಳುತ್ತಾರೆ. ಈ ಸಮ್ಮೇಳನದಲ್ಲಿ ೫೦ಕ್ಕೂ ಮಿಕ್ಕ ಮಹಿಳೆಯರು ವಿವಿಧ ಗೋಷ್ಠಿಗಳಲ್ಲಿ ಭಾಗವಹಿಸುತ್ತಾರೆ. ಮತ್ತು ಮುನ್ನೂರಕ್ಕೂ ಹೆಚ್ಚು ಹಿರಿಯ ಕಿರಿಯ ಲೇಖಕಿಯರು ಸೇರಿಕೊಳ್ಳುತ್ತಾರೆ.

ಕಾಸರಗೋಡಿನ ಕನ್ನಡ ಮಹಿಳಾ ಸಂಘ ಕರ್ನಾಟಕ ಸಾಹಿತ್ಯ ಅಕಾಡೆಮಿಯ ನೆರವಿನೊಂದಿಗೆ ಮಹಿಳಾ ಸಾಹಿತ್ಯ ನಡೆಸಿತು. ಬಳಿಕ ೧೯೮೭ರಲ್ಲಿ ಪುತ್ತೂರು ಕರ್ನಾಟಕ ಸಂಘವೂ ಜಿಲ್ಲಾ ಮಹಿಳಾ ಸಾಹಿತ್ಯ ವಿಚಾರ ಗೋಷ್ಠಿಯನ್ನು ಹಮ್ಮಿಕೊಂಡಿತು ಇಲ್ಲಿ ಜಿಲ್ಲೆಯ ಹಲವಾರು ಲೇಖಕಿಯರು ಹಾಗೂ ಕರ್ನಾಟಕ ಲೇಖಕಿಯರ ಸಂಘದಿಂದಲೂ ಆಗಮಿಸಿ ಬಾಗವಹಿಸಿದರು. ಈ ಸಮಯದಲ್ಲಿ ಪುತ್ತೂರು ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದವರು ಶ್ರೀ ಬೋಳಂತಕೋಡಿ ಈಶ್ವರ ಭಟ್‌ರವರು ಮತ್ತು ಪುತ್ತೂರು ಕನ್ನಡ ಸಂಘದ ಅಧ್ಯಕ್ಷರಾದ ವಿ. ಜಿ. ಮೊಳೆಯಾರ್ ಮತ್ತು ದಿ। ಮಾಧವ ನಾಯಕರು "ನೀವು ಮಹಿಳೆಯರೆಲ್ಲ ಸೇರಿಕೊಂಡು ನಿಮ್ಮದೇ ಒಂದು ಸಂಘ ಯಾಕೆ ಕಟ್ಟಬಾರದು?" ಎಂದು ಕೇಳಿದರಿಂದಾಗಿ ಅಲ್ಲಿ ಸೇರಿದ ಎಲ್ಲಾ ಲೇಖಕಿಯರಿಗೂ ತಮ್ಮ ಕನಸಿಗೆ ಲೇಖಕರ ಬೆಂಬಲವು ದೊರಕಿದಂತಾಗುತ್ತದೆ. ಮಹಿಳಾ ಗೋಷ್ಠಿಗಳೆಲ್ಲಾ ಮುಗಿದ ಬಳಿಕ ಕರಾವಳಿಯಲ್ಲಿ ಲೇಖಕಿಯರ ಸಂಘ ಸ್ಥಾಪಿಸಲೆಂದೇ ಪ್ರತ್ಯೇಕ ಸಭೆಯನ್ನು ಏರ್ಪಡಿಸಲಾಗುತ್ತದೆ. ಈ ಸಭೆಯಲ್ಲಿ ವೈದೇಹಿಯವರು, ಎ.ಪಿ.ಮಾಲತಿ, ಗಂಗಾಪಾದೆಕಲ್, ಮನೋರಮ ಎಂ. ಭಟ್, ಚಂದ್ರಕಲಾ ನಂದಾವರ, ಪದ್ಮಾಶೆಣೈ, ಆನಂದಿ ಸದಾಶಿವರಾವ್, ಕೆ.ವಿ. ಜಲಜಾಕ್ಷಿ, ಲೀಲಾವತಿ ಎಸ್.ರಾವ್, ಸಾವಿತ್ರಿ ಯಂ. ಮುಳಿಯ, ರತ್ನಾಜಿ. ಕೆ. ಶೆಟ್ಟಿ ಮೊದಲಾದವರು ಭಾಗವಹಿಸುತ್ತಾರೆ. ಈ ಸಭೆಯಲ್ಲಿಯೇ ಮೊತ್ತ ಮೊದಲಿಗೆ ಕರಾವಳಿಯಲ್ಲೂ ಲೇಖಕಿಯರ ಸಂಘ ಸ್ಥಾಪನೆಗೊಳ್ಳಲು ದೇಣಿಗೆಯನ್ನು ನೀಡಿದವರು ದಿ। ಮಾಧವ ನಾಯಕರು ಎಂಬುದಾಗಿ ಸಂಘ ಸ್ಥಾಪನೆಗೆ ಶ್ರಮಿಸಿದ ಲೇಖಕಿಯರೆಲ್ಲರೂ ಸ್ಮರಿಸಿಕೊಳ್ಳುತ್ತಾರೆ. ಹೀಗೆ ಕರ್ನಾಟಕದ ಎಲ್ಲ ಭಾಗದ ಲೇಖಕಿಯರು ಬೇಕೆಂದಾಗ ಒಟ್ಟು ಗೂಡುವುದಾಗಲಿ, ಕಾರ್ಯಕ್ರಮ ಸಂಘಟಿಸುವುದಾಗಲಿ ಅಸಾಧ್ಯವಾದ ಮಾತು. ಕರ್ನಾಟಕದ ಲೇಖಕಿಯರ ಸಂಘದ ಸದಸ್ಯೆಯರಾಗಿದ್ದುಕೊಂಡೇ ಇಲ್ಲಿ ನಮ್ಮ ಪ್ರತ್ಯೇಕ ಸಂಘಟನೆಯೊಂದು ಆರಂಭವಾದರೆ ಉತ್ತಮವಲ್ಲವೇ? ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬೆರಳೆಣಿಕೆಯಷ್ಟಾದರೂ ಲೇಖಕಿಯರಿದ್ದಾರೆಂದ ಮೇಲೆ ಅವರೆಲ್ಲರನ್ನು ಒಂದೆಡೆ ಕಲೆ ಹಾಕುವ ಪ್ರಯತ್ನವನ್ನೇಕೆ ಮಾಡಬಾರದು? ವಾಚಕಿಯರಿಲ್ಲದೆ ಲೇಖಕಿಯರಿಲ್ಲ ಎಂದ ಮೇಲೆ ವಾಚಕಿಯರೂ ಜೊತೆಯಲ್ಲಿದ್ದರೆ ಉತ್ತಮವಲ್ಲವೇ? ಜಿಲ್ಲೆಯ ಮಹಿಳೆಯರಲ್ಲಿ ಸಾಹಿತ್ಯಾಭಿರುಚಿ ಮೂಡಿಸಲು ಹಾಗೂ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಮತ್ತಷ್ಟು ಶ್ರೀಮಂತಗೊಳಿಸಲು ಇಂತಹ ಒಂದು ಸಂಘಟನೆ ಕರಾವಳಿಯಲ್ಲಿ ರೂಪುಗೊಳ್ಳುವುದು ಅಗತ್ಯವಲ್ಲವೇ? ಇಂತಹ ಹಲವಾರು ಚಿಂತನೆಗಳಿಂದ ಆರಂಭವಾದ ಸಂಘಟನೆಯೇ ಕರಾವಳಿ ಲೇಖಕಿಯರ ವಾಚಕಿಯರ ಸಂಘ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಎಂಬ ಅಭಿಪ್ರಾಯವನ್ನು ಸಂಘ ಸ್ಥಾಪನೆಗೆ ಶ್ರಮಿಸಿದ ಎಲ್ಲಾ ಲೇಖಕಿಯರು ಹೇಳುತ್ತಾರೆ.

### ೩.೩.ಕರಾವಳಿ ಲೇಖಕಿಯರ –ವಾಚಕಿಯರ ಸಂಘ ಬೆಳೆದು ಬಂದ ದಾರಿ:

ಕರಾವಳಿ ಲೇಖಕಿಯರ–ವಾಚಕಿಯರ ಸಂಘವು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕಾಸರಗೋಡು ಜಿಲ್ಲೆಯ ಲೇಖಕಿಯರು ಮತ್ತು ವಾಚಕಿಯರು ತಮ್ಮ ಸಾಹಿತ್ಯಕ ಚಟುವಟಿಕೆಗಳಿಗೆ ವೇದಿಕೆಯೆಂಬಂತೆ ೫–೧೨–೧೯೮೭ರಂದು ಹುಟ್ಟಿದ ಸಂಘವಾಗಿದೆ. ಈ ಸಂಘದ ಮುಖ್ಯ ಧ್ಯೇಯೋದ್ದೇಶಗಳು ಈ ಕೆಳಗಿನಂತಿವೆ:

*(೧) ಸಂಘದ ವ್ಯಾಪ್ತಿಯೊಳಗಿರುವ ಕನ್ನಡ ಲೇಖಕಿಯರನ್ನು ಒಂದುಗೂಡಿಸಿ ಅವರ ಸೃಜನಶೀಲ ಪ್ರತಿಭೆಯ ಅಭಿವ್ಯಕ್ತಿಗೆ ಅನೂಕೂಲವಾಗುವ ಒಂದು ವೇದಿಕೆಯನ್ನು ಕಲ್ಪಿಸಿಕೊಡುವುದು.*

*(೨) ಮಹಿಳೆಯರಲ್ಲಿ ಸಾಹಿತ್ಯದ ಕುರಿತು ಆಸಕ್ತಿ – ಅಭಿರುಚಿಗಳನ್ನು ಬೆಳೆಸುವ ಉದ್ದೇಶದಿಂದ ಲೇಖಕಿ ಮತ್ತು ವಾಚಕಿಯಾರೊಳಗೆ ಪರಸ್ಪರ ಸೌಹಾರ್ದಯುತವಾದ ಸಂಬಂಧವನ್ನು ಪ್ರೋತ್ಸಾಹಿಸುವುದು.*

*(೩) ಉದಯೋನ್ಮುಖ ಲೇಖಕಿಯರನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಅಂಥವರ ಕೃತಿಗಳನ್ನು ಪ್ರಕಟಿಸಲು ಸಾಧ್ಯವಾದ ಪ್ರಯತ್ನಗಳನ್ನು ಮಾಡುವುದು.*

*(೪) ಸಾಹಿತ್ಯ–ಸಂಸ್ಕೃತಿಗಳ ಕ್ಷೇತ್ರದಲ್ಲಿ ಗಣನೀಯ ಸೇವೆಸಲ್ಲಿಸಿದ ಮಹಿಳೆಯರನ್ನು ಗುರುತಿಸಿ ಸನ್ಮಾನಿಸುವ ಮೂಲಕ ಅವರ ಕೃತಿಗಳು ಸಾಮಾಜಿಕರನ್ನು ತಲುಪುವಂತೆ ಪ್ರಯತ್ನಿಸುವುದು.*

*(೫) ಮಹಿಳೆಯರ ಸಾಂಸ್ಕೃತಿಕ–ಬೌದ್ಧಿಕ ಉನ್ನತಿಯನ್ನು ಸಾಧಿಸುವುದಕ್ಕಾಗಿ ಮಹಿಳಾ ಸಾಹಿತ್ಯ ಗ್ರಂಥಾಲಯವನ್ನು ಸ್ಥಾಪಿಸುವುದು.*

*(೬) ಮೇಲಿನ ಉದ್ದೇಶಗಳಿಗಾಗಿ ಸಾಹಿತ್ಯ ವಿಮರ್ಶೆ–ಸಾಹಿತ್ಯಗೋಷ್ಠಿ–ಕವಿತಾ–ಗೋಷ್ಠಿ ಸಮ್ಮೇಳನ ಇತ್ಯಾದಿ ಉಪಯುಕ್ತ ಕಾರ್ಯಕ್ರಮಗಳನ್ನು ಸಂಘದ ವ್ಯಾಪ್ತಿಯೊಳಗಿನ ವಿವಿಧ ಕ್ರೇಂದ್ರಗಳಲ್ಲಿ ಏರ್ಪಡಿಸಿ ಜರಗಿಸುವುದು.*

*(೭) ಕತೆ. ಕವಿತೆ. ನಾಟಕ. ಕಾದಂಬರಿ ಮೊದಲಾದ ಕ್ಷೇತ್ರಗಳಲ್ಲಿ ಮಹಿಳೆಯಲ್ಲಿರುವ ಸೃಜನಶೀಲ ಪ್ರತಿಭೆಯನ್ನು ಪೋಷಿಸುವುದಕ್ಕಾಗಿ ಮಾರ್ಗದರ್ಶಕ ಕಮ್ಮಟಗಳನ್ನು ಜರಗಿಸುವುದು.*

*(೮) ಮಹಿಳೆಯರ ಸಾಹಿತ್ಯ ರಚನಾ ಪ್ರವೃತ್ತಿಯನ್ನು ಪ್ರೋತ್ಸಾಹಿಸುವುದಕ್ಕಾಗಿ ಸ್ಪರ್ಧೆಗಳನ್ನು ಏರ್ಪಡಿಸುವುದು.*

*(೯) ಲೇಖಕಿಯರ ಸ್ಥಿತಿಗತಿಗಳನ್ನು ಉತ್ತಮಗೊಳಿಸುವುದು.*

*(೧೦) ಮೇಲಿನ ಉದ್ದೇಶಗಳನ್ನು ಸಾಧಿಸುವುದಕ್ಕಾಗಿ ಸಮಾನ ಧ್ಯೇಯವುಳ್ಳ ಇತರ ಸಂಘ ಸಂಸ್ಥೆಗಳೊಂದಿಗೆ ಸಕ್ರಿಯವಾಗಿ ಸಹಕರಿಸುವುದು.*

*(೧೧) ಈ ಮೇಲಿನ ಉದ್ದೇಶಗಳಿಗಾಗಿ ಸರಕಾರದೊಂದಿಗೆ ಸಹಕಾರ–ಸಂಪರ್ಕಗಳನ್ನು ಬೆಳೆಸಿಕೊಳ್ಳುವುದು.*

ಈ ರೀತಿಯ ಉದ್ದೇಶಗಳನಿಟ್ಟುಕೊಂಡು ಸಂಘಟನೆಯನ್ನಾರಂಭಿಸಲು ಪ್ರಥಮ ಬಾರಿ ೫–೧೨–೧೯೮೭ರಲ್ಲಿ

ಸುರತ್ಕಲಿನ ಗೋವಿಂದಾಸ್ ಕಾಲೇಜಿನಲ್ಲಿ ಸಭೆ ಸೇರಿದಾಗ ಬಂದ ಮಹಿಳೆಯರು ಕೇವಲ ಬೆರಳೆಣಿಕೆಯಷ್ಟು ಮಾತ್ರ ಎಂದು ಹೆಸರಾಂತ ಲೇಖಕಿ ಸಾರಾ ಅಬೂಬಕ್ಕರ್‌ರವರು ಹೇಳುತ್ತಾರೆ. ಈ ಸಂಘಟನೆಯನ್ನು ಬೃಹದಾಕಾರವಾಗಿ ಬೆಳೆಸಬೇಕೆಂಬ ಮಹತ್ವಾಕಾಂಕ್ಷೆ ಕರಾವಳಿಯ ಲೇಖಕಿಯರಿಗಿದ್ದರೂ ಪ್ರಾರಂಭದಲ್ಲಿ ಹೇಳಿಕೊಳ್ಳುವಂತಹ ಬೆಂಬಲವೇನೂ ದೊರೆಯಲ್ಲಿಲ್ಲ. “ಹುಟ್ಟಿದ ಕೂಸು ಹಾಲಿಲ್ಲದೆಯೂ ಸೊರಗಿತು ಹೊಸದಾಗಿ ಹುಟ್ಟಿದ ಕೂಸಿಗೆ ಎದುರಾದ ಎಲ್ಲ ತೊಂದರೆಗಳೂ ಈ ಸಂಘಟನೆಗೂ ಎದುರಾಗಿದ್ದವು.”[೯] ಎಂದು ಸಾರಾ ಅಬೂಬಕ್ಕರ್‌ರವರು ಹೇಳುತ್ತಾರೆ. ಸಭೆ ಕರೆದು ರೂಪಿಸಿದ ಸಂಘಟನೆಗೆ ‘ಕರಾವಳಿ ಲೇಖಕಿಯರ ವಾಚಕಿಯರ ಸಂಘ ದಕ್ಷಿಣ ಕನ್ನಡ–ಕಾಸರಗೋಡು. ಎಂದು ನಾಮಕರಣ ಮಾಡಲಾಯಿತು. ಆರಂಭದ ೧೯೮೭–೧೯೮೮ರ ಸಮಿತಿಯಲ್ಲಿ ಅಧ್ಯಕ್ಷರಾಗಿ ಪದ್ಮಾಶೆಣೈ ಉಪಾಧ್ಯಕ್ಷರಾಗಿ ಸಾರಾ ಅಬೂಬಕ್ಕರ್ ಕಾರ್ಯದರ್ಶಿಗಳಾಗಿ ಲೀಲಾವತಿ ಎಸ್. ರಾವ್. ಮತ್ತು ಗೀತಾ ಸುರತ್ಕಲ್ ಕೋಶಾಧಿಕಾರಿಯಾಗಿ ಚಂದ್ರಕಲಾ ನಂದಾವರ ಹಾಗೂ ಕಾರ್ಯಕಾರಿ ಸಮಿತಿಯ ಸದಸ್ಯೆಯರಾಗಿ ಮನೋರಮಾ ಎಂ.ಭಟ್. ಬಿ.ಎಂ.ರೋಹಿಣಿ. ಮಾಲತಿ ರಾವ್ ಪೇಜಾವರ. ಶಶಿಕಲಾ ಶೆಟ್ಟಿ. ಇಂದುಮತಿ ರಾಮಮೂರ್ತಿ. ಡಾ।ಸಬಿಹಾ ಭೂಮಿಗೌಡ, ಅ.ನಾ.ಪೂರ್ಣಿಮಾ, ಕಾಸರಗೋಡಿನ ಯು. ಮಹೇಶ್ವರಿ, ಕಾರ್ಕಳದ ಯು.ಬಿ.ರಾಜಲಕ್ಷ್ಮಿ, ಕುಂದಾಪುರದ ಗಾಯತ್ರಿ ನಾವಡ, ಉಡುಪಿಯ ಪುಷ್ಪಾ ಎಸ್.ಎಸ್.ಭಟ್.ಈ ರೀತಿಯಾಗಿ ಮೊದಲ ಸಮಿತಿಯನ್ನು ಮಾಡಿ ಕೊಂಡು ಸಂಘದ ಮೊತ್ತ ಮೊದಲ ಕಾರ್ಯಕ್ರಮವಾಗಿ ೧೯೮೮ ಸೆಪ್ಟೆಂಬರ್ ೧೧ರಂದು ಮಂಗಳೂರಿನ ಬೆಸೆಂಟ್ ಪದವಿ ಪೂರ್ವ ಕಾಲೇಜಿನಲ್ಲಿ ಲೇಖಕಿಯರ ೧೯೮೭ರ ‘ಸಾಹಿತ್ಯ ಸಮೀಕ್ಷೆ’ ಎಂಬ ವಿಷಯದಲ್ಲಿ ಸಾಹಿತ್ಯಗೋಷ್ಠಿಯನ್ನು ಹಮ್ಮಿಕೊಳ್ಳುತ್ತದೆ. ಈ ಸಂದರ್ಭದಲ್ಲಿ ಗೋಷ್ಠಿಯ ಅಧ್ಯಕ್ಷರಾಗಿ ಎಸ್.ಆರ್. ವಿಜಯ ಶಂಕರ್ ವಹಿಸಿದ್ದು ಮುಖ್ಯ ಅತಿಥಿಯಾಗಿ ಬಿ. ಭಾಸ್ಕರ್ ರಾವ್ ಆಗಮಿಸಿದ್ದರು. ಶ್ರೀಮತಿ ಸಬಿಹಾ ಭೂಮಿಗೌಡ, ಗಾಯತ್ರಿ ನಾವಡ, ಜ್ಯೋತಿ ಕುಮಾರಿ, ಎಸ್. ಸಿ. ಲೀಲಾಬಾಯಿ ಇವರುಗಳು ವಿವಿಧ ವಿಷಯದ ಕುರಿತು ಉಪನ್ಯಾಸ ನೀಡಿದರು. ಇದೇ ವರ್ಷ ಸಂಘಟನೆಯ ವತಿಯಿಂದ ಡಿಸೆಂಬರ್ ಹತ್ತರಂದು ಮಂಗಳೂರಿನಲ್ಲಿ ಕವನ ಸಂಕಲನ ಕೃತಿ ಬಿಡುಗಡೆ ಕಾರ್ಯಕ್ರಮ ನಡೆಯಿತು. ಜ್ಯೋತಿ ಕುಮಾರ , ಸಿ. ಲೀಲಾಬಾಯಿ, ಮುರಳೀಧರ ಉಪಾಧ್ಯ, ಸಾರಾ ಅಬೂಬಕ್ಕರ್‌ರವರು ಭಾಗವಹಿಸಿದ್ದರು. ಡಿಸೆಂಬರ್ ಮೂವತ್ತೊಂದರಂದು ೧೯೮೮ರ ‘ತುಷಾರ ಮಂಥನ’ ಎಂಬ ಕಾರ್ಯಕ್ರಮ ಉಡುಪಿಯಲ್ಲಿ ಜರಗಿತ್ತು. ಇಲ್ಲಿ ಎ.ಪಿ. ಮಾಲತಿ ಮನೋರಮಾ ಎಂ.ಭಟ್. ಅ.ನಾ ಪೂರ್ಣಿಮಾ. ಪ್ರಸನ್ನ ಕುಮಾರಿ. ಅಂಶುಮಾಲಿ ಕೊಳ್ಳೆಗಾಲ ಶರ್ಮಾ ಇವರುಗಳು ಭಾಗವಹಿಸಿದ್ದರು. ಸಂಘದ ನಾಲ್ಕನೇ ಕಾರ್ಯಕ್ರಮವಾಗಿ ೧೯೮೯ ಫೆಬ್ರವರಿಯಲ್ಲಿ ಕಾರ್ಕಳದಲ್ಲಿ ಮಹಿಳೆ ಮತ್ತು ಕಾನೂನು ಎಂಬ ವಿಚಾರ ಗೋಷ್ಠಿಯನ್ನು ನಡೆಸಿತು. ಇದೇ ವರ್ಷ ಜುಲೈ ಒಂದರಂದು ಮಂಗಳೂರು ಬೆಸೆಂಟ್ ಕಾಲೇಜಿನಲ್ಲಿ ‘ಕಾವ್ಯ ವರ್ಷ–ಕವಯತ್ರಿಯರ ಸಮ್ಮಿಲನ’ ಎಂಬ ಕವಿಗೋಷ್ಠಿಯನ್ನು ನಡೆಸಿತು. ಈ ಗೋಷ್ಠಿಯಲ್ಲಿ ೨೫ಕ್ಕೂ ಅಧಿಕ ಕವಯತ್ರಿಯರು ಭಾಗವಹಿಸಿದ್ದು ಗೋಷ್ಠಿಯಲ್ಲಿ ಜಿಲ್ಲೆಯ ಕವಯತ್ರಿಯರ ಶಕ್ತಿ ಎಷ್ಟು ಸಂಘಟಿತವೆಂದು ಬಹಿರಂಗಕ್ಕೆ ಬಂತು. ಅಂದಿನ ಪ್ರತಿಯೊಂದು ಕವನದಲ್ಲೂ ಹೊಸ ವಿಚಾರ, ಚಿಂತನೆ ಕಂಡು ಬಂದಿತ್ತು, “ಶೋಷಣೆ, ಪುರುಷರ ದೂಷಣೆ. ವಿರಹ. ಅತೃಪ್ತಿ. ವೇದನೆ ಏಕಾಂತದಲ್ಲಿ ಮಾತ್ರ ಕಾವ್ಯಗಳು ಗಿರಕಿ ಹೊಡೆಯದೆ ಸಮಾಜದ ವ್ಯವಸ್ಥೆಯನ್ನು ನೋಡುವ ವ್ಯಭಿಚಾರ, ವಿಪರ್ಯಾಸಗಳನ್ನು ವಿಡಂಬಿಸುವ, ಸಾಮಾಜಿಕ ಅಸಮಾನತೆಯನ್ನು ಪ್ರತಿಭಟಿಸುವ ಸಂಕೇತಗಳಾಗಿ ಗಮನ ಸೆಳೆದವು ಎಂಬುದಾಗಿ ಅಂದಿನ ಪತ್ರಿಕೆಗಳು ವರದಿ ಮಾಡಿದ್ದವು.”[೧೦] ಕಾವ್ಯ ಸೃಷ್ಟಿಯಲ್ಲಿ ವಿಸ್ಮಯ. ಅನ್ವೇಷಣೆ. ಅರ್ಥವಂತಿಕೆಯ ಪಾತ್ರ ಮಹತ್ವವೆಂದು, ಆಕಸ್ಮಿಕಗಳನ್ನು ಕಲ್ಪನೆಗೆ ಬಲಿಗೊಡದೆ ಬದುಕಿನ ಸ್ಪಂದನೆಗೆ ಎಟುಕುವಂತೆ ಅವಲೋಕಿಸಿ ಬರೆಯ ಬೇಕು. ವಿಷಯದ ಆಳಕ್ಕಿಳಿದು ಬರೆದಾಗಲೇ ಬರಹದ ತೀವ್ರತೆ ಮನದಟ್ಟಾಗುತ್ತದೆ ಎಂದು ಅಂದಿನ ಕವಿಗೋಷ್ಠಿಯ ಅಧ್ಯಕ್ಷರಾಗಿದ್ದ ವೈದೆಹಿಯವರ ಮಾತುಗಳನ್ನು ಈಗಲೂ ಸಂಘದ ಸದಸ್ಯೆಯರು ಸ್ಮರಿಸಿಕೊಳ್ಳುತ್ತಾರೆ. ೧೯೮೯ರ ಜುಲೈ ೨೯ ರಂದು ಕರಾವಳಿ ಲೇಖಕಿಯರ– ವಾಚಕಿಯರ ಸಂಘ ಮತ್ತು ವಿದ್ಯಾದಾಯಿನಿ ಹಳೆ ವಿಧ್ಯಾರ್ಥಿ ಸಂಘ ಇವರ ಸಂಯುಕ್ತ

ಆಶ್ರಯದಲ್ಲಿ 'ದೃಶ್ಯ –ಶ್ರವ್ಯ' ಎನ್ನುವ ನಾಟಕಗಳಿಗೆ ಸಂಬಂಧಿಸಿದ ವಿಚಾರಗೋಷ್ಠಿ ಮತ್ತು ಶ್ರೀಮತಿ ಆನಂದಿ ಎಸ್. ರಾಮ್‌ರವರ 'Songs of Silence' ಎನ್ನುವ ಇಂಗ್ಲೀಷ್ ಕವಿತಾ ಸಂಕಲದ ಬಿಡುಗಡೆ ಕಾರ್ಯಕ್ರಮ ಸುರತ್ಕಲ್‌ನಲ್ಲಿ ನಡೆಯಿತು. ರೇಡಿಯೋ ನಾಟಕಗಳ ಬಗ್ಗೆ ಪ್ರಬಂಧವನ್ನು ಮಂಡಿಸಿ, "ದೃಶ್ಯ ಮಾಧ್ಯಮಕ್ಕಿಂತ ತೀರಭಿನ್ನವಾದ ರೇಡಿಯೋ ಮಾಧ್ಯಮ ಸತ್ವಯುತವಾಗಿ ಸಂವಹನವಾಗಬೇಕಾದರೆ ರೇಡಿಯೋ ಕಥೆಯೇ ಆಗಲಿ ನಾಟಕಗಳೇ ಆಗಿರಲಿ ಪಾತ್ರಗಳ ಜೀವ ಸಹಿತ-ಶ್ರೋತೃವಿನ ಮನಸ್ಸನ್ನು ತಟ್ಟಬೇಕು. ಕೇವಲ ಧ್ವನಿಯ ಉಪಯೋಗದಿಂದಷ್ಟೇ ಶ್ರೋತೃಗಳನ್ನು ರಸಸ್ವಾದನೆಯುತ್ತ ಸೆಳೆಯಬಲ್ಲ ಶ್ರವ್ಯ ಮಾಧ್ಯಮ ಹೇಗೆ ಕೃತಿಕರ್ತೃವಿನ ಭಾವನೆಗಳನ್ನು ಪರಿಣಾಮಕಾರಿಯೂ ಸಂವಹನ ಗೊಳಿಸಬಲ್ಲುದು."[೧೧] ಎಂಬುದನ್ನು ವಿವರಿಸಿದೆ ಎಂದು ಮನೋರಮಾರವರು ಸ್ಮರಿಸಿಕೊಳ್ಳುತ್ತಾರೆ. ೧೯೯೧ ಜನವರಿ ಒಂದರಂದು ಪುತ್ತೂರಿನ ರಾಜೇಶ್ ಪವರ್ ಪ್ರೆಸ್‌ನ ವಠಾರದಲ್ಲಿ ಕರಾವಳಿ ಲೇಖಕಿಯರ ವಾಚಕಿಯ ಸಂಘ ಮತ್ತು ಕರ್ನಾಟಕ ಸಂಘ ಪುತ್ತೂರು ಇವರ ಜಂಟಿ ಆಶ್ರಯದಲ್ಲಿ 'ದಶಕದ ಸಾಹಿತ್ಯ'ದಲ್ಲಿ 'ಸ್ತ್ರೀ ಚಿತ್ರಣ' ಎಂಬ ವಿಚಾರ ಗೋಷ್ಠಿಯನ್ನು ನಡೆಸುತ್ತಾರೆ. "ಸ್ತ್ರೀ ಪುರುಷರ ಇಬ್ಬರಲ್ಲೂ ಪಕ್ಷಪಾತಿಗಳಿದ್ದಾರೆ. ಸ್ತ್ರೀವಾದಿಗಳಾದ ಪುರುಷರೂ ಪುರುಷ ಪರರಾದ ಸ್ತ್ರೀಯರೂ ಇದ್ದಾರೆ. ಮಾನವತಾವಾದಕ್ಕೆ ತಾರತಮ್ಯ ಇಲ್ಲ ಅನೇಕ ಸ್ತ್ರೀ ಚಳವಳಿಗಳಿಗೆ ಚಾಲನೆ ನೀಡಿದ ಪುರುಷರು ನಮ್ಮಲ್ಲಿದ್ದಾರೆ. ದೈಹಿಕ ಭಾವನೆಗಳು ಸಂತೋಷ, ಕಾಮ ಪ್ರೇಮ ಇತ್ಯಾದಿಗಳು ವೈಯುಕ್ತಿಕ ವಿಕೃತಿಗಳಿಂದ ಹೊರತಾಗಿ ಸ್ತ್ರೀ ಪುರುಷರಲ್ಲಿ ಸಮಾನವಾಗಿವೆ."[೧೨] ಎಂದು ಖ್ಯಾತ ಲೇಖಕಿ ಡಾ। ವಿಜಯಾ ದಬ್ಬೆ ನುಡಿಯುತಾರೆ. ದಶಕದ ಕಾದಂಬರಿಗಳ ಕುರಿತು ಶ್ರೀ ಗಣನಾಥ ಶೆಟ್ಟಿ ಎಕ್ಕಾರು, ಸಣ್ಣಕತೆಗಳ ಬಗ್ಗೆ ಶ್ರೀಮತಿ ಸಬಿಹಾಭೂಮಿ ಗೌಡ, ನಾಟಕಗಳ ಬಗ್ಗೆ ಶ್ರೀಮತಿ ಗೀತಾ ಸುರತ್ಕಲ್, ಕವನಗಳ ಕುರಿತು ಶ್ರೀ ವಾಮನ ನಂದಾವರ ಪ್ರಬಂಧಗಳನ್ನು ಮಂಡಿಸಿದರು. ಎಂಬುದಾಗಿ ಸ್ಥಾಪಕ ಲೇಖಕಿಯರು ಸ್ಮರಿಸಿಕೊಳ್ಳುತ್ತಾ ಇದೆಲ್ಲವು ಸಂಘಟನೆ ಸಾಧನೆ ಎಂಬುದಾಗಿ ಹೇಳುತ್ತಾರೆ. ಸ್ಪಂದನ  ವೇದಿಕೆ ವಿಜಯ ಕಾಲೇಜು, ಸಾಹಿತ್ಯ ಸಂಘ ಮತ್ತು ಕರಾವಳಿ ಲೇಖಕಿಯರ ಸಂಘಗಳ ಜಂಟಿ ಆಶ್ರಯದಲ್ಲಿ ಜನವರಿ ೨೮, ೧೯೯೩ರಲ್ಲಿ ಈ ಸಂಘಟನೆಯು ಹಲವು ಏರುಪೇರುಗಳನ್ನು ಎದುರಿಸುತ್ತಾ ಸಾಕಷ್ಟು ಗಂಭೀರವಾದ ಮತ್ತು ಮೌಲಿಕವಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಇದರ ಯಶಸ್ಸಿಗೆ ಇದುವರೆಗಿನ ಎಲ್ಲಾ ಪದಾಧಿಕಾರಿಗಳು ಮತ್ತು ಅಜೀವ ಸದಸ್ಯೆಯರ ಸಹಕಾರ ಒಗ್ಗಟ್ಟು ಮತ್ತು ಸಮಾನ ಮನೋಭಾವಗಳು ಕಾರಣ ಎಂದು ಸಂಘದ ಪದಾಧಿಕಾರಿಗಳ ಅಭಿಪ್ರಾಯ.

ಸಂಘದ ಸಾಧನೆಯ ಬಗ್ಗೆ ಖ್ಯಾತ ಲೇಖಕಿ ಸಾರಾ ಅಬೂಬಕ್ಕರ್ ಹೀಗೆ ದಾಖಲಿಸುತ್ತಾರೆ. "ಸಂಘದಿಂದ ವಿಚಾರಣ ಸಂಕಿರಣ, ಕವಿಗೋಷ್ಠಿ, ಕೃತಿ ಬಿಡುಗಡೆ, ವಿಮರ್ಶಾ ಸ್ಪರ್ಧೆ, ಆಕಾಶವಾಣಿ ಕಾರ್ಯಕ್ರಮ ಮುಂತಾದ ಹಲವಾರು ಕಾರ್ಯಕ್ರಮಗಳಲ್ಲದೆ ಅಕಾಶವಾಣಿ ನಾಟಕವನ್ನು ರಂಗದ ಮೇಲೆ ಅಭಿನಯಿಸಿ ಸಂಘದ ಸದಸ್ಯರ ಪ್ರತಿಭೆಯನ್ನು ಮೆರೆದಿದ್ದಾರೆ. ೧೯೯೩ರಲ್ಲಿ ಶೋಭಾ ಕಲ್ಯಾಣಪುರ ಅವರು ತಮ್ಮ ತಾಯಿ ಕೃಷ್ಣಾ ಬಾಯಿಯವರ ಹೆಸರಿನಲ್ಲಿ ದತ್ತಿನಿಧಿಯಿಂದ ನೆರವು ನೀಡಿದಾಗ ಜಿಲ್ಲೆಯ ಕವಯತ್ರಿಯರಿಂದ ಕವನಗಳನ್ನು ಆಹ್ವಾನಿಸಿ 'ಕರೆ' ಎಂಬ ಕವನ ಸಂಕಲನವನ್ನು ಪ್ರಕಟಿಸಿ ಬಿಡುಗಡೆಗೊಳಿಸಲಾಯಿತು. ಜಿಲ್ಲೆಯಲ್ಲಿ ಐವತ್ತು ಜನ ಕವಯತ್ರಿಯರಿದ್ದಾರೆಂದು ಹೇಳಿಕೊಳ್ಳುವುದೇ ಹೆಮ್ಮೆಯ ವಿಷಯ. ಇಷ್ಟು ಜನ ಕವಯತ್ರಿಯರನ್ನು ಜಿಲ್ಲೆಗೆ ಪರಿಚಯಿಸಿದ ಕೀರ್ತಿ ಸಂಘಕ್ಕೆ ಲಭಿಸುತ್ತದೆ. ಸಂಘದ ಪರವಾಗಿ ಈ ಕೃತಿಯನ್ನು ಶ್ರಮವಹಿಸಿ ಸಂಪಾದಿಸಿದವರು ಯು. ಮಹೇಶ್ವರಿ ಹಾಗೂ ಚಂದ್ರಕಲಾ ನಂದಾವರ. ಇದೊಂದು ಸಾಧನೆಯ ಮೈಲಿಗಲ್ಲೆಂದು ಹೇಳಬಹುದು. ಕವನ, ಸಣ್ಣಕತೆ, ಕಾದಂಬರಿ ಮುಂತಾದ ಎಲ್ಲಾ ಪ್ರಕಾರಗಳಲ್ಲೂ ಸಾಹಿತ್ಯ ಅಕಾಡೆಮಿ ಹಾಗೂ ಇನ್ನಿತರ ಹಲವಾರು ಪ್ರಶಸ್ತಿಗಳನ್ನು ಪಡೆದ ಲೇಖಕಿಯರು ಸಂಘದ ಸದಸ್ಯೆಯರಾಗಿದ್ದರೆಂಬುದು ಹೆಮ್ಮೆಯ ವಿಷಯ ಆಗಿದೆ"[೧೩] ಹೀಗೆ ಹಲವಾರು ರೀತಿಯಲ್ಲಿ ಸಂಘಟನೆ ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಗಳನ್ನು ನೀಡುತ್ತಾ ಬಂದಿದೆ.

ಸಾಹಿತ್ಯ ಅಕಾಡೆಮಿಯ ನೆರವಿನಿಂದ "ಈ ಶತಮಾನದ ಸಾಮಾಜಿಕ, ಸಾಹಿತ್ಯಿಕ ಹಿನ್ನಲೆಯಲ್ಲಿ ಮಹಿಳೆ, ದಕ್ಷಿಣ ಕನ್ನಡಕ್ಕೆ ಸೀಮಿತವಾದಂತೆ ಎಂಬ ವಿಷಯದ ಕುರಿತು ವಿಚಾರ ಸಂಕಿರಣವನ್ನು ಮಂಗಳೂರಿನ ಬೆಸೆಂಟ್ ಪದವಿ ಪೂರ್ವ ಕಾಲೇಜಿನಲ್ಲಿ ೧೯೯೩ ನವಂಬರ್ ೭ ಭಾನುವಾರ ನಡೆಸಲಾಗುತ್ತದೆ. ಈ ಕಾರ್ಯಕ್ರಮದಲ್ಲಿ ಡಾ। ಸಿ. ಹೊಸಬೆಟ್ಟು, ಬಿ.ಎಂ. ಇದಿನಬ್ಬ, ಡಾ। ಬಿ. ಎ. ವಿವೇಕ ರೈ, ಸಬಿಹಾ ಭೂಮಿಗೌಡ, ಯು. ಮಹೇಶ್ವರಿ, ಯು.ಬಿ. ರಾಜಲಕ್ಷ್ಮಿ, ಮಾಲತಿ ರಾವ್ ಪೇಜಾವರ, ಪ್ರೊ. ಲೀಲಾ ಭಟ್, ಉದ್ಯಾವರ ಮಾಧವ ಆಚಾರ್ಯ, ಅಬ್ದುಲ್ ರಶೀದ್, ಡಾ। ನಾ.ದಾಮೋದರ ಶೆಟ್ಟಿ, ಡಾ। ಪಿ.ಎನ್. ಮಯ್ಯ, ಪದ್ಮಾ ಶೆಣೈ, ಎ.ಪಿ.ಮಾಲತಿ, ಡಾ। ಸತ್ಯನಾರಾಯಣ, ಆರ್. ನರಸಿಂಹ ಮೂರ್ತಿ, ಮನೋಹರ ಪ್ರಸಾದ್, ಜಿ.ಕೆ. ಐತಾಳ್, ವೈದೇಹಿ, ರಾಮದಾಸ್, ಆನಂದಿ ಎಸ್.ರಾವ್ ಭಾಗಿಯಾಗಿದ್ದರು. ಮುಂದಿನ ಶತಮಾನಕ್ಕೆ ಕಾಲಿಡಲು ಈ ಶತಮಾನದ ಹೊಸ್ತಿಲಲ್ಲಿ ನಿಂತಿರುವ ನಾವು ನಡೆದು ಬಂದ ಹಾದಿಯನ್ನೊಮ್ಮೆ ಹಿಂತಿರುಗಿ ನೋಡಿದರೆ ಹೇಗೆ ಎಂಬ ಅನಿಸಿಕೆಯೇ ಕಾರ್ಯಕ್ರಮಕ್ಕೆ ಸ್ಫೂರ್ತಿಯಾಗಿತ್ತು ಎಂದು ಸಾರಾ ಅಬೂಬಕ್ಕರ್ ಹೇಳುತ್ತಾರೆ. ಕಾರ್ಯಕ್ರಮವನ್ನು ಉದ್ಘಾಟಿಸಿ ಡಾ। ಸೀತಾರಾಮಾಚಾರ್ಯ ಹೊಸಬೆಟ್ಟುರವರು 'ಮಹಿಳಾ ಚಳುವಳಿ ಆಗಲೇ ಅನಾವರಣಗೊಂಡಿದೆ. ೭೫ ವರ್ಷಗಳ ಹಿಂದೆ ಒಂದು ಕಾಂಗ್ರೇಸ್ ಸಮ್ಮೇಳನದಲ್ಲಿ ಜೆ.ಬಿ. ಕೃಪಲಾನಿಯವರು ಮಹಿಳೆಯರು ಸೀತೆ ಸಾವಿತ್ರಿಯರಂತೆ ತ್ಯಾಗ ಪ್ರೇಮವನ್ನು ರೂಢಿಸಿಕೊಳ್ಳಬೇಕು ಎಂದಾಗ ಸರೋಜಿನಿ ನಾಯಿಡು ಅವರು ತ್ಯಾಗ ಪ್ರೇಮಗಳು ತಮ್ಮಲ್ಲಿ ಈಗಾಗಲೇ ಇವೆ ಅವುಗಳನ್ನು ತೋರಿಸುವುದಕ್ಕಾಗಿ ನಾವು ಅವರಂತೆ ಅಪಹೃತೆಯೋ, ವಿಧವೆಯೋ ಆಗಬೇಕೇ ಎಂದು ಪ್ರಶ್ನಿಸಿದರು. ಆಗಲೇ ಮಹಿಳಾ ಚಳವಳಿ ಆರಂಭವಾಗಿದೆ ಎಂದರು".[೧೪] ಹೀಗೆ ಮಹಿಳೆಯರ ಸಾಧನೆಗಳೇನು ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುವುದೇ ಅಂದಿನ ವಿಚಾರ ಸಂಕಿರಣದ ಉದ್ದೇಶವಾಗಿತ್ತು.

"೧೯೯೪ರಲ್ಲಿ ಸಾರಾ ಅಬೂಬಕ್ಕರ್ ಸಂಘದ ಅಧ್ಯಕ್ಷೆಯಾಗಿದ್ದ ಅವಧಿಯಲ್ಲಿ ಮಂಗಳೂರಿನ ಸಂತ ಅಲೋಷಿಯಸ್ ಕಾಲೇಜಿನ ಸಭಾಂಗಣದಲ್ಲಿ ಅಕ್ಟೋಬರ್ ೨೨ ಮತ್ತು ೨೩ರಂದು ಎರಡು ದಿನಗಳ ದಕ್ಷಿಣ ಕನ್ನಡ ಜಿಲ್ಲಾಮಟ್ಟದ ಮೊದಲ ಮಹಿಳಾ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಿತ್ತು. ದ.ಕ.ಜಿಲ್ಲಾ ಸಾಹಿತ್ಯ ಪರಿಷತ್ತು, ಕನ್ನಡ ಸಂಸ್ಕೃತಿ ಇಲಾಖೆಯ ನೆರವಿನಿಂದ ನಡೆದ ಸಮ್ಮೇಳನದ ಸಮ್ಮೇಳನಾಧ್ಯಕ್ಷತೆಯನ್ನು ಎ. ಪಿ. ಮಾಲತಿಯವರು ವಹಿಸಿಕೊಂಡಿದ್ದರು. ಹಿರಿಯ ಲೇಖಕಿಯರಾದ ಅತ್ತಿಮಬ್ಬೆ, ಗಿರಿಬಾಲೆ, ಪಡುಕೋಣೆ ಸೀತಾಬಾಯಿ ನೆನಪುಗಳ ಗೋಷ್ಠಿ, ಅಕ್ಕಮಹಾದೇವಿ, ಹೊನ್ನಮ್ಮನ ಸಾಂಗತ್ಯಗಳು, ಗಿರಿಯಮ್ಮನ ಸಂಪ್ರದಾಯದ ಹಾಡುಗಳ ಕಾವ್ಯವಾಚನ, ಜಾನಪದ ಗೋಷ್ಠಿ, ಮಹಿಳೆ ಮತ್ತು ಬಂಡಾಯ ಪ್ರಜ್ಞೆಗೋಷ್ಠಿ, ಮಿನಿಕಥಾ ವಾಚನ ಗೋಷ್ಠಿ, ಕಿರುನಾಟಕ, ಯಕ್ಷಗಾನ ತಾಳಮದ್ದಳೆ ಹೀಗೆ ದ.ಕ.ಕನ್ನಡ ಸಾಹಿತ್ಯ-ಸಾಂಸ್ಕೃತಿಕ ಕಾರ್ಯಕ್ರಮ ಅದ್ದೂರಿಯಿಂದ ನಡೆದಿತ್ತು. ಅವಿಭಜಿತ ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು ಸೇರಿ ಸಾಕಷ್ಟು ಸಂಖ್ಯೆಯಲ್ಲಿ ಲೇಖಕಿಯರು ವಾಚಕಿಯರು ಸೇರಿದ್ದರು".[೧೫] ಎಂದು ಎ. ಪಿ. ಮಾಲತಿಯವರು ಹೇಳುತ್ತಾರೆ.

೧೯೯೬ರ ಜನವರಿ ತಿಂಗಳಿನಲ್ಲಿ ಸಂಘಟನೆಯು ಭಾರತೀಯ ಸ್ತ್ರೀವಾದದ ಕುರಿತು ಎರಡು ದಿನಗಳ ಶಿಬಿರವೊಂದನ್ನು ಹಮ್ಮಿಕೊಂಡಿತ್ತು. ಸ್ತ್ರೀವಾದದ ಗೊತ್ತು ಗುರಿಗಳ ಕುರಿತು ಮೈಸೂರು ಹಾಗೂ ಮಂಗಳೂರು ವಿಶ್ವ ವಿದ್ಯಾನಿಲಯಗಳ ಪ್ರಾಧ್ಯಾಪಕರುಗಳು ಸ್ತ್ರೀವಾದದ ಕುರಿತು ಅಪಾರ್ಥ ಕಲ್ಪನೆಗಳನ್ನು ನೀಗಿಸುವ ನಿಟ್ಟಿನಲ್ಲಿ ಉಪನ್ಯಾಸ ನೀಡಿದರು. ಜಿಲ್ಲೆಯಾದ್ಯಂತದಿಂದ ಸುಮಾರು ಮೂವತ್ತು ಜನ ಸ್ತ್ರೀ ಪುರುಷರು ಈ ಶಿಬಿರದಲ್ಲಿ ಭಾಗವಹಿಸಿದ್ದರು. ಎಂದು ದಾಖಲೆಗಳು ತಿಳಿಸುತ್ತವೆ. ಈ ಹಿನ್ನೆಲೆಯಲ್ಲಿ ಮಹಿಳೆಯರಲ್ಲಿ ಸಾಹಿತ್ಯಿಕ ಎಚ್ಚರ ಮತ್ತು ಸಾಮಾಜಿಕ ಕಳಕಳಿ ಮೂಡಿಸುವ ದೃಷ್ಟಿಯಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಮಹಿಳೆಯರ ಸಾಹಿತ್ಯಿಕ ಸಾಧನೆಗಳೇನು ಎಂಬ ಕುರಿತು ಉತ್ಖನನ ನಡೆಸಿ ಆ ಕುರಿತು ಪುಸ್ತಕ ಪ್ರಕಟಿಸಲು ಯೋಜನೆಯನ್ನು ಹಾಕಿತು. ಆ ಪ್ರಯತ್ನದ ಫಲವಾಗಿ ೨೫-೦೮-

೧೯೯೬ರಲ್ಲಿ 'ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಲೇಖಕಿಯರು' ಕೃತಿ ರೂಪದಲ್ಲಿ ಹೊರಬಂದಿದೆ. ಹುಡುಕಾಟದಲ್ಲಿ ಎಲೆಮರೆಯ ಕಾಯಿಯಂತಿದ್ದು ಗಮನಕ್ಕೆ ಬಂದ ಹದಿನಾರು ಹಿರಿಯ ಬರಹಗಾರ್ತಿಯರ ಸ್ಥೂಲವಾದ ಜೀವನ ಹಾಗೂ ಕೃತಿ ಪರಿಚಯಗಳನ್ನು ಹೊತ್ತಗೆಯಲ್ಲಿ ದಾಖಲಿಸಿದ್ದಾರೆ.

ಸಂಘ ಉತ್ಖನನ ಮಾಡಿ ಸಾಹಿತ್ಯ ಕುಟುಂಬಕ್ಕೆ ಪರಿಚಯಿಸಿದ ದಕ್ಷಿಣ ಕನ್ನಡದ ಹಿರಿಯ ಲೇಖಕಿಯರು ಈ ಕೆಳಗಿನಂತಿದೆ.

೧) ಕವಯತ್ರಿ ಮುಳಿಯ ಮೂಕಾಂಬಿಕ ಅಮ್ಮ

೨) ದಕ್ಷಿಣ ಕನ್ನಡದ ಆದ್ಯ ಕವಯತ್ರಿ ನೆಲ್ಲಿಕಾರು 'ಜೈನ ಮಹಿಳೆ' ರಾಧಾಮತಿ

೩) ಸೀತಾದೇವಿ ಪಡುಕೋಣೆ

೪) ಉಡುಪಿಯ ಭಾರತೀಬಾಯಿ ಪಣಿಯಾಡಿ

೫) ಮಟ್ಪಾಡಿ ಕಮಲಾಕ್ಷಿ (ಮಟ್ಪಾಡಿ ಕಮಲಾಕ್ಷಮ್ಮ)

೬) ಕೃಷ್ಣವೇಣಿ ಬಾಯಿ (ಕೆ.ವಿ. ಬಾಯಿ)

೭) ವಾಸಂತಿಬಾಯಿ ಪಡುಕೋಣೆ

೮) ಬೆಳ್ಳೆ ಸೀತಾರತ್ನಮ್ಮ

೯) ಲೀಲಾಬಾಯಿ ಕಾಮತ್

೧೦) 'ಗಿರಿಬಾಲೆ'ಸರಸ್ವತಿ ಬಾಯಿ ರಾಜವಾಡ

೧೧) ಚಂದ್ರಭಾಗಿ ಕೆ.ರೈ

೧೨) ಲೀಲಾ ಕಾರಂತರು

೧೩) ಶಾರದಾ ಶಾಸ್ತ್ರಿ– ನಾಟಕ ಕರ್ತೃ ಮತ್ತು ನಿರ್ದೇಶಕಿ

೧೪) ಲಲಿತಾ ರೈ

೧೫) ಆನಂದಿ ಸದಾಶಿವ ರಾವ್

ಮಹಿಳೆಯರ ಸಾಧನೆ ಗೌಣವೆಂದೆ ಪರಿಗಣಿಸಲ್ಪಡುತ್ತಿರುವ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಇಂದಿಗೂ ಮಹಿಳಾ ಸಾಹಿತ್ಯವನ್ನು ಸಮನಾಗಿ ಗುರುತಿಸುವ ಪರಿಪಾಠವಿಲ್ಲ. ಹೀಗಾಗಿಯೇ ಮಹಿಳಾ ಸಾಹಿತಿಗಳ ಸಾಧನೆಗಳ ಮೇಲೆ ಬೆಳಕು ಚೆಲ್ಲಿ ದಾಖಲಿಸುವ ಅನೇಕ ಪ್ರಯತ್ನಗಳನ್ನು ಮಾಡಲಾಗಿದೆ. ಈ ಪ್ರಯತ್ನ ಮಹಾಸಾಧನೆ ಎನ್ನಲಾಗದಿದ್ದರೂ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳಾ ಸಾಹಿತ್ಯ ಕ್ಷೇತ್ರದಲ್ಲಿ ಇದೊಂದು ಮೈಲಿಗಲ್ಲು ಎಂದು ಹೇಳಲು ಅಡ್ಡಿಯಿಲ್ಲವೆಂದು ಸಾರಾ ಅಬೂಬಕ್ಕರ್ ಹೇಳುತ್ತಾರೆ.

ಸಂಘಟನೆ ಪ್ರಾರಂಭವಾದ ದಿನದಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಕರ್ನಾಟಕ ಲೇಖಕಿಯರ ಸಂಘ, ಕನ್ನಡ ಸಾಹಿತ್ಯ ಪರಿಷತ್ತು ಇವುಗಳ ಸಹಯೋಗದೊಂದಿಗೆ ಹಲವಾರು ಚಾರಿತ್ರಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದ ಸಂಘಕ್ಕೆ ತನ್ನದೇ ಆದ ಭವನದ ಕೊರತೆ ಇತ್ತು. ಆರಂಭದ ದಿನಗಳಲ್ಲಿ ಅಧ್ಯಕ್ಷರ ಮನೆಗಳಲ್ಲಿಯೇ ಸಭೆಗಳನ್ನು ನಡೆಸಿಕೊಂಡು ಬರುತ್ತಿದ್ದವು. ಎಂಬುವುದನ್ನು ಸಂಘದ ಹಿರಿಯ ಸದಸ್ಯರು ನೆನಪಿಸಿಕೊಳ್ಳುತ್ತಾರೆ.

ನಾಡೋಜ ಡಾ। ಸಾರಾ ಅಬೂಬಕ್ಕರ್ ಅವರ ಮುಂದಾಳತ್ವದಲ್ಲಿ ಶ್ರೀಮತಿ ಚಂದ್ರಕಲಾ ನಂದಾವರ, ಲೀಲಾವತಿ ಎಸ್.ರಾವ್, ಡಾ। ಸಬಿಹಾ ಭೂಮಿಗೌಡ, ಮನೋರಮಾ ಎಂ. ಭಟ್, ರತ್ನಾ ಜಿ.ಕೆ. ಶೆಟ್ಟಿ ಮೊದಲಾದವರ ಶ್ರಮ ಮತ್ತು ಪ್ರಾಮಾಣಿಕ ಪ್ರಯತ್ನ ದಾನಿಗಳ ಸಹಕಾರದ ಫಲವಾಗಿ ಜಿಲ್ಲಾಡಳಿತವು ರಿಯಾಯಿತಿ ದರದಲ್ಲಿ ೧೯೯೮ರಲ್ಲಿ ಆಗಿನ ಜಿಲ್ಲಾಧಿಕಾರಿ ಶ್ರೀ ಅನಿಲ್ ಕುಮಾರ್‌ರಿಂದ ಮಂಗಳೂರಿನ ಉರ್ವ ಸ್ಟೋರ್‌ನಲ್ಲಿ ಮಂಜೂರಾದ ಐದು ಸೆಂಟ್ಸು ಸ್ಥಳವನ್ನು ಸಂಘವು ಖರೀದಿಸಲು ಶಕ್ತವಾಗುತ್ತದೆ. ಅಂದಿನ ಕೇಂದ್ರ ವಿತ್ತ ಸಹಾಯಕ ಸಚಿವರಾಗಿದ್ದ ಶ್ರೀ ಧನಂಜಯ ಕುಮಾರ್ ಅವರು ಸಂಸದರ ನಿಧಿಯಿಂದ ಕೊಡಮಾಡಿದ ಒಂದು ಲಕ್ಷ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಮಾಜಿ ಸಚಿವೆಯರಾದ ಶ್ರೀಮತಿ ಲೀಲಾದೇವಿ ಆರ್.ಪ್ರಸಾದ್ ಅವರ ಮುತುವರ್ಜಿಯಿಂದ ದೊರೆತ ರೂ. ೫೦,೦೦೦/–ವನ್ನು ಸೇರಿಸಿ ೨೦೦೦ದಲ್ಲಿ ಕಟ್ಟಡಕ್ಕೆ ಶಂಕುಸ್ಥಾಪನೆ ಮಾಡುತ್ತಾರೆ. ಮುಂದೆ ಸಂಘದ ಸದಸ್ಯೆಯರ ಆರು ವರ್ಷಗಳ ಸಾಂಘಿಕ ಹಾಗೂ ಸಕ್ರಿಯ ಪ್ರಯತ್ನದಿಂದ ದಾನಿಗಳಿಂದ ಸಂಗ್ರಹಿಸಿದ ಹಣ, ಡಾ। ನಾ. ದಾಮೋದರ ಶೆಟ್ಟಿ ಹಾಗೂ ಡಾ। ಸತ್ಯನಾರಾಯಣ ಮಲ್ಲಿಪಟ್ಟಣರ ಸಲಹೆಯಿಂದ ಪುತ್ತೂರು ಶ್ರೀ ನರಸಿಂಹ ನಾಯಕ್ ಮತ್ತು ಅವರ ತಂಡದಿಂದ ರಸಮಂಜರಿ ಕಾರ್ಯಕ್ರಮವನ್ನು ಹಮ್ಮಿಕೊಂಡುದರಿಂದ ಬಂದ ಮೊತ್ತ ಇವೆಲ್ಲವುಗಳಿಂದ ೨೦೦೬ರಲ್ಲಿ ಸಂಘಕ್ಕೆ ತನ್ನದೇ ಆದ ಸ್ವಂತ ಕಟ್ಟಡವಾದ 'ಸಾಹಿತ್ಯ ಸದನ' ನಿರ್ಮಾಣವಾಗುತ್ತದೆ. ಇದರ ಉದ್ಘಾಟನೆಯನ್ನು ೧೯–೦೮–೨೦೦೬ರಲ್ಲಿ ಕರ್ನಾಟಕ ಸರಕಾರದ ಮಾಜಿ ಸಚಿವೆ ಲೀಲಾವತಿ ಆರ್. ಪ್ರಸಾದ್‌ರವರು ನೆರವೇರುತ್ತಾರೆ. ಮುಂದೆ ಎಂ.ಆರ್.ಪಿ.ಎಲ್ ಸಂಸ್ಥೆಯ ಸಹಾಯದಿಂದ ಕಟ್ಟಡದ ಮೇಲಂತಸ್ತನ್ನು ಕಟ್ಟಲಾಗಿದ್ದು, ಕೆಳಗಿನ ಅಂತಸ್ತಿನಲ್ಲಿ ಸುಮಾರು ೫೦ ಮಂದಿ ಕೂರಬಹುದಾದ ವಿಶಾಲವಾದ ಹಾಲ್ ಇದೆ. ಇಲ್ಲಿ ಶ್ರೀಮತಿ ಇಂದಿರಾ ಶಿವಣ್ಣ ಅವರು ಒದಗಿಸಿದ ಕನ್ನಡದ ಲೇಖಕಿಯರ ಅಲಭ್ಯ ಛಾಯಚಿತ್ರಗಳನ್ನು ಅನಾವರಣ ಮಾಡಲಾಗಿದ್ದು, ಮೇಲಂತಸ್ತಿನಲ್ಲಿ ಒಂದು ಹಾಲ್ ಹಾಗೂ ಎರಡು ಕೊಠಡಿಗಳಿವೆ. ಇನ್ಫೋಸಿಸ್ ಸಂಸ್ಥೆಯ ಶ್ರೀಮತಿ ಸುಧಾಮೂರ್ತಿಯವರ ಧನ ಸಹಾಯದಿಂದ ಖರೀದಿಸಿದ, ಓದುಗರಿಗೆ ಉಪಯುಕ್ತವಾದ ಅಮೂಲ್ಯ ಗ್ರಂಥಗಳೊಂದಿಗೆ ಹಲವರು ಕೊಡಮಾಡಿದ ಗ್ರಂಥಗಳನ್ನೊಳಗೊಂಡ ಅಮೂಲ್ಯವಾದ ಗ್ರಂಥಾಲಯವನ್ನು ಸಂಘವು ಹೊಂದಿದೆ. ಹೀಗೆ ಸಂಘವು ಸರ್ವೋದಯ, ಸರ್ವ ಸಮನ್ವಯ, ಸಾಮಾಜಿಕ ಸೌಹಾರ್ದತೆಯ ಗುಣದಿಂದ ಪ್ರತಿಷ್ಠಿತ ಸ್ಥಾನದಲ್ಲಿದೆ.

ಸಂಘವು ಹೊಸ ತಲೆಮಾರಿನವರಲ್ಲಿ ಸಾಹಿತ್ಯದ ಒಲವು ಮತ್ತು ವೈಚಾರಿಕತೆಯನ್ನು ಉದ್ದೀಪಿಸುವ ಸಲುವಾಗಿ ಪ್ರತಿವರ್ಷವೂ ಕವನ, ವಿಮರ್ಶಾ ಲೇಖನ, ಪ್ರಚಲಿತ ಸಮಸ್ಯೆಗಳ ಕುರಿತ ಪ್ರಬಂಧ, ವಿನೋದ ಇತ್ಯಾದಿ ಪ್ರಕಾರಗಳಲ್ಲಿ ಕಾಲೇಜಿನ ವಿದ್ಯಾರ್ಥಿಗಳಿಗೆ ಸ್ಪರ್ಧೆಗಳನ್ನು ನಡೆಸುವುದು, ವಿದ್ಯಾರ್ಥಿಗಳು ಕೇಳುವಂತೆ ಪ್ರೋತ್ಸಾಹಿಸುವುದು ಮುಂತಾದ ಕಾರ್ಯಕ್ರಮಗಳನ್ನು ಈವರೆಗೂ ನಡೆಸಿಕೊಂಡು ಬಂದಿದೆ. ಸಂಘದಲ್ಲಿ ಸ್ಥಾಪನೆಯಾಗಿರುವ ವಿವಿಧ ದತ್ತಿನಿಧಿ ಇಂತಹ ಕಾರ್ಯಕ್ರಮಗಳಿಗೆ ವಿನಿಯೋಗವಾಗುತ್ತಿವೆ. ಮಂಗಳೂರು ವಿಶ್ವ ವಿದ್ಯಾಲಯಮಟ್ಟದ ಹಲವು ಕಾಲೇಜುಗಳೂ ಈ ನಿಟ್ಟಿನಲ್ಲಿ ಸಹಕರಿಸುತ್ತಾ ಬಂದಿವೆಂದು ಹಿರಿಯ ಸದಸ್ಯರು ಹೇಳುತ್ತಾರೆ. ಹೀಗೆ ಸಂಘವು ಹಮ್ಮಿಕೊಳ್ಳುವ ಸಾಹಿತ್ಯ ಕಮ್ಮಟಗಳು ಉದಯೋನ್ಮುಖ ಸಾಹಿತ್ಯಿಕ ಪ್ರತಿಭೆಗಳನ್ನು ಬೆಳೆಸುವಲ್ಲಿ ನೆರವಾಗಿದೆ. ಸಂಘದ ಸದಸ್ಯೆಯರಿಗಾಗಿಯೂ ಅನೇಕ ಸಾಹಿತ್ಯಿಕ

ಸ್ಪರ್ಧೆಗಳನ್ನು ಅಯೋಜಿಸಲಾಗುತ್ತಿದೆ. ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ನಡೆಸಲಾಗುತ್ತಿದೆ. ಕನ್ನಡ, ತುಳು, ಕೊಂಕಣಿ, ಬ್ಯಾರಿ. ಹವ್ಯಕ. ಅರೆಭಾಷೆಗಳ ಲೇಖಕಿಯರ ಬಳಗ ಇದಾಗಿದ್ದು ಸದಸ್ಯರನೇಕರು ರಾಜ್ಯ, ರಾಷ್ಟ್ರ ಮಟ್ಟಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಸಂಘವು ಪ್ರೇರೇಪಿಸಿದೆ. ಇವಲ್ಲದೆ ವರ್ಷದುದ್ದಕ್ಕೂ ಹಮ್ಮಿಕೊಳ್ಳುವ ಕಾರ್ಯಕ್ರಮಗಳಲ್ಲಿ ಮುಖ್ಯವಾದವು ಸದಸ್ಯೆಯರ ಕೃತಿಬಿಡುಗಡೆ, ಕವಿಗೋಷ್ಠಿ, ಕಥಾಗೋಷ್ಠಿ, ಕಮ್ಮಟಗಳು, ಕಾವ್ಯವಾಚನ, ಭಾವಗೀತೆ, ತರಬೇತಿ, ಶಿಬಿರ, ಕರಾವಳಿ ಸದಸ್ಯೆಯರ ಕೃತಿ ವಿಮರ್ಶೆ, ಸಾಧಕ ಸದಸ್ಯೆಯರಿಗೆ ಅಭಿನಂದನೆ, ಸನ್ಮಾನ ಕಾರ್ಯಕ್ರಮಗಳು, ಆಕಾಶವಾಣಿಯಲ್ಲಿ ವೈವಿಧ್ಯಮಯ ಕಾರ್ಯಕ್ರಮಗಳು, ಮಹಿಳಾ ದಿನಾಚರಣೆ, ಮಹಿಳಾ ದೌರ್ಜನ್ಯದ ಪ್ರತಿಭಟನಾ ಕಾರ್ಯಕ್ರಮ ಮತ್ತು ಮೆರವಣಿಗೆಗಳಲ್ಲಿ ಪಾಲ್ಗೊಳ್ಳುವುದು ರಾಜ್ಯದ ಇತರ ಮಹಿಳಾ ಸಾಹಿತ್ಯ ಸಂಘಟನೆಗಳ ಸಹಯೋಗದಲ್ಲಿ ಕಾರ್ಯಕ್ರಮಗಳನ್ನು ನಡೆಸುವುದು, ಪ್ರವಾಸ ನಡೆಸುವುದು ಇತ್ಯಾದಿ ಸಾಹಿತ್ಯಿಕ ಚಟುವಟಿಕೆಗಳನ್ನು ವರ್ಷಂಪ್ರತಿ ಹಮ್ಮಿಕೊಳ್ಳುತ್ತಾ ಬಂದಿದೆ.

೨೦೧೧-೧೨ ಸಂಘದ ಬೆಳ್ಳಿಹಬ್ಬ ಆಚರಣೆಯ ವರ್ಷವಾಗಿದೆ. ಈ ಸಂಭ್ರಮವನ್ನು ಎಲ್ಲರ ಜೊತೆ ಸೇರಿ ಆಚರಿಸುವುದು ಸಂಘದ ಎಲ್ಲಾ ಸದಸ್ಯರ ಆಶಯವಾಗಿತ್ತು ಎಂಬುದನ್ನು ಸದಸ್ಯರು ವ್ಯಕ್ತಪಡಿಸುತ್ತಾರೆ. ೨೦೧೧ ಡಿಸೆಂಬರ್ ೬ ರಂದು ಸಾಹಿತ್ಯ ಸದನದಲ್ಲಿ ಸಂಘವು ಇಪತ್ತೈದರ ವರ್ಷಕ್ಕೆ ಕಾಲಿಡುತ್ತಿರುವ ಸಂಭ್ರಮ ಆಚರಣೆಯ ಉದ್ಘಾಟನೆಯನ್ನು ಬೆಂಗಳೂರಿನ ಹಿರಿಯ ಲೇಖಕಿ, ಆಕಾಶವಾಣಿಯ ನಿವೃತ್ತ ಸುದ್ದಿ ಸಂಪಾದಕಿ ಹಾಗೂ ಕರ್ನಾಟಕ ಲೇಖಕಿಯರ ಸಂಘದ ಮಾಜಿ ಅಧ್ಯಕ್ಷೆಯೂ ಆದ ಶ್ರೀಮತಿ ನಾಗಮಣಿ ಎಸ್. ರಾವ್‌ರವರಿಂದ ನಡೆದರೆ, ಬೆಳ್ಳಿಹಬ್ಬದ ಸಮಾರೋಪ ದಿನದ ಉದ್ಘಾಟನೆಯನ್ನು ಹೆಸರಾಂತ ಲೇಖಕಿ ಶ್ರೀಮತಿ ವೈದೇಹಿಯವರು ನಡೆಸಿಕೊಡುತ್ತಾರೆ. ಈ ಬೆಳ್ಳಿಹಬ್ಬದ ಕಾರ್ಯಕ್ರಮಗಳಲ್ಲಿ ಕರ್ನಾಟಕದಾದ್ಯಂತ ಇರುವ ಮಹಿಳಾ ಸಾಹಿತ್ಯ ಸಂಘಟನೆಗಳ ಜೊತೆಗೆ ಸ್ನೇಹ ಸಮ್ಮಿಲನ, ಕವಿಗೋಷ್ಠಿ, ಲಲಿತ ಪ್ರಬಂಧಗೋಷ್ಠಿಗಳನ್ನು ಆಯೋಜಿಸಲಾಗುತ್ತದೆ.

೨೦೧೩ ಮಾರ್ಚ್ ೬, ೭, ೮ರಂದು ಅಂತರಾಷ್ಟ್ರೀಯ ಮಹಿಳಾ ವರ್ಷದ ಅಂಗವಾಗಿ ಮಂಗಳೂರಿನಲ್ಲಿ ಕರ್ನಾಟಕದ ಬೇರೆ ಹಲವಾರು ಮಹಿಳಾ ಸಂಘಟನೆಯ ಜೊತೆ ಕರಾವಳಿ ಲೇಖಕಿ-ವಾಚಕಿಯರ ಸಂಘವೂ ಕೈ ಜೋಡಿಸಿತ್ತು. "ವಿಕೃತ ಮನಸ್ಸಿನ ಯುವಕನೊಬ್ಬ ಅಮಾಯಕ ಯುವತಿಯರ ಜೊತೆ ಪ್ರೇಮ ಸಲ್ಲಾಪ ನಡೆಸಿ ಕೊನೆಗೆ ಅಮಾನುಷವಾಗಿ ಅವರಿಗೆ ಗತಿ ಕಾಣಿಸಿದ್ದು, ಪಬ್ ದಾಳಿಯಲ್ಲಿ ಯುವತಿಯರೇ ದೌರ್ಜನ್ಯಕ್ಕೆ ತುತ್ತಾದದ್ದು, ಹೋಂಸ್ಟೇ ಪ್ರಕರಣದಲ್ಲಿ ಮತ್ತೆ ಹೆಂಗಸರನ್ನೇ ಗುರಿ ಮಾಡಿದ್ದು. ಲವ್ ಜಿಹಾದ್ ಹೆಸರಿನಲ್ಲಿ ಅವರ ಬದುಕಿನ ಖಾಸಗೀತನಕ್ಕೆ ಧಕ್ಕೆ ತಂದದ್ದು, ಧರ್ಮಸ್ಥಳದ ಸೌಜನ್ಯಳಂತಹ ಮುಗ್ಧ ಯುವತಿಯರ ಮೇಲೆ ನಿರಂತರವಾಗಿ ನಡೆಯುತ್ತಿರುವ ಅತ್ಯಾಚಾರ. ಯುವತಿಯರ ನಾಪತ್ತೆ ಪ್ರಕರಣ ಇತ್ಯಾದಿಯಿಂದ ಇತ್ತೀಚೆಗೆ ಕರಾವಳಿ ಪ್ರದೇಶದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿ, ತಲ್ಲಣ, ಆತಂಕಗಳು ನಮ್ಮ ಹೆಣ್ಣು ಮಕ್ಕಳು ಅದೆಷ್ಟು ಸುರಕ್ಷಿತರು? ಎಂದು ತತ್ತರಿಸುವ ಪಾಲಕರು. ಒಟ್ಟಿನಲ್ಲಿ ಮೊದಲಿನಿಂದಲೂ ಶಾಂತವಾಗಿದ್ದ ದ. ಕನ್ನಡ ಕರಾವಳಿ ಪ್ರದೇಶದಲ್ಲಿ ಇತ್ತೀಚೆಗೆ ಏಳುತ್ತಿರುವ ಇಂತಹ ಉಬ್ಬರದ ಅಲೆಗಳು ಆ ಭಾಗದಲ್ಲಿ ಮಾತ್ರವಲ್ಲ ದೇಶದಾದ್ಯಂತ ಸದ್ದುಗದ್ದಲ ಎಬ್ಬಿಸುತ್ತ ಜನರ ನಿದ್ದೆಗೆಡಿಸಿದ್ದವು. ಇನ್ನು ನೋಡುತ್ತ ಸುಮ್ಮನಿರುವುದೆಂತು? ಎಲ್ಲೇ ಯಾವುದೋ ಒಂದು ಹೆಣ್ಣಿನ ಮೇಲೆ ಆಗುತ್ತಿರುವ ದೌರ್ಜನ್ಯ ನಾಳೆ ನಮ್ಮ ಮನೆ ಹೆಣ್ಣು ಮಕ್ಕಳಿಗೂ ಆಗಬಹುದಲ್ಲವೇ? ಅದರ ಮೊದಲೇ ಎಚ್ಚುತ್ತುಕೊಳ್ಳ ಬೇಕಾಗಿದೆ. ನಿರಂತರ ಅವರ ಮೇಲೆ ನಡೆಯುತ್ತಿರುವ ಹಿಂಸೆ, ದೌರ್ಜನ್ಯ ಖಂಡಿಸಬೇಕು, ಮುಕ್ತಾಯ ಹಾಡಬೇಕು. ಜಾತಿ. ಮಹಿಳಾ ಸಂಘಟನೆಗಳು ಪ್ರತಿಭಟನೆಯ ದನಿ ಎತ್ತಬೇಕು."[೧೬] ಇವು ಮಂಗಳೂರಿನಲ್ಲಿ ನಡೆದ ಬೃಹತ್ ಮಹಿಳಾ ಸಮಾವೇಶಕ್ಕೆ ಪ್ರಮುಖ ಕಾರಣಗಳು. 'ಇನ್ನು ಸಾಕು' ಎನ್ನುವ ಘೋಷಣೆಯಲ್ಲಿ ಮಾರ್ಚ್ ೪ರಂದು ದಕ್ಷಿಣ ಕನ್ನಡ ಜಿಲ್ಲೆಯ ಮತ್ತು ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಮಹಿಳಾ ಪರ ಸಂಘಟನೆಗಳು, ಲೇಖಕಿಯರು, ಯುವ ಸಮುದಾಯದವರು, ಸಾರ್ವಜನಿಕರು ಅಧಿಕೃತ

ಸಂಖ್ಯೆಯಲ್ಲಿ ಸೇರಿದ್ದು ಇದೊಂದು ಚಾರಿತ್ರಿಕ ದಿನ ಎಂಬುದಾಗಿ ಹಿರಿಯ ಲೇಖಕಿ ಎ.ಪಿ.ಮಾಲತಿಯವರು ಹೇಳುತ್ತಾರೆ.

ಹೀಗೆ ಸುದೀರ್ಘವಾದ ಮೂರು ದಶಕಗಳ ಇತಿಹಾಸವನ್ನು ಕರಾವಳಿ ಲೇಖಕಿಯರ-ವಾಚಕಿಯರ ಸಂಘ ಹೊಂದಿದೆ. ಸಂಘದ ಸದಸ್ಯೆಯರು, ಲೇಖಕಿಯರು, ಉಡುಪಿ, ಕಾರ್ಕಳ, ಪುತ್ತೂರು, ಮಂಗಳೂರು, ಕಾಸರಗೋಡು, ಕೊಡಗು, ಸುಳ್ಯ ಹೀಗೆ ಬೇರೆ ಬೇರೆ ತಾಲೂಕಿನ ಮಹಿಳೆಯರು ಮುನ್ನೂರಕ್ಕೂ ಅಧಿಕವಿದ್ದಾರೆ. ಇತ್ತೀಚಿನ ಕೆಲವು ವರ್ಷಗಳಲ್ಲಿ ಕರಾವಳಿ ಲೇಖಕಿಯರ-ವಾಚಕಿಯರ ಸಂಘದಿಂದಲೇ ಪ್ರೇರಣೆಗೊಂಡು ಇದರ ಸದಸ್ಯರೇ ತಮ್ಮ ತಮ್ಮ ತಾಲೂಕಿನಲ್ಲಿ ಸಂಘಗಳನ್ನು ಸ್ಥಾಪಿಸಿದ್ದಾರೆ. ಉದಾ : ಉಡುಪಿಯಲ್ಲಿ ಮಹಿಳಾ ಲೇಖಕರಿಯರ ಸಂಘ, ಕಾರ್ಕಳದಲ್ಲಿ ಮಹಿಳಾ ಜಾಗೃತಿ ಮಹಿಳಾ ಸಂಘ, ಕೊಡಗು ಮಹಿಳಾ ಲೇಖಕಿಯರ ಸಂಘ, ಈ ಸಂಘಗಳು ಹುಟ್ಟಿಕೊಂಡಿದ್ದರಿಂದ ಕರಾವಳಿ ಲೇಖಕಿ ವಾಚಕಿಯರ ಸಂಘಕ್ಕೆ ಧಕ್ಕೆ ಆಗಲಿಲ್ಲ, ಈ ಎಲ್ಲಾ ಸಂಘಗಳ ಜೊತೆಯಲ್ಲಿ ಜಂಟಿಯಾಗಿ ಸಾಹಿತ್ಯ ಕಾರ್ಯಕ್ರಮವನ್ನು ನಡೆಸಿಕೊಂಡು ಬಂದಿರುವುದು ಸಂಘದ ಬೆಳವಣಿಗೆಯ ಲಕ್ಷಣವಾಗಿದೆ.

## ಸಂದರ್ಭ ಸೂಚಿ


೧. ಮನೋರಮಾ ಭಟ್, ಸಂದರ್ಶನ ದಿನಾಂಕ ೦೬-೦೬-೨೦೧೭

೨. ಮನೋರಮಾ ಭಟ್, ಸಂದರ್ಶನ ದಿನಾಂಕ ೦೬-೦೬-೨೦೧೭

೩. ಬಿ.ಎಂ. ರೋಹಿಣಿ, ಸಂದರ್ಶನ ದಿನಾಂಕ ೨೬-೦೫-೨೦೧೭

೪. ಚಂದ್ರಕಲಾ ನಂದಾವರ : ಸಂದರ್ಶನ ದಿನಾಂಕ ೦೪-೦೭-೨೦೧೭

೫. ಚಂದ್ರಕಲಾ ನಂದಾವರ : 'ಹೊಸ್ತಿಲಿಂದೀಚೆಗೆ', ಹೇಮಾಂಶು ಪ್ರಕಾಶನ, ಮಂಗಳೂರು ೧೯೯೧, ಪುಟಸಂಖ್ಯೆ -೩

೬. ಚಂದ್ರಕಲಾ ನಂದಾವರ : 'ಹೊಸ್ತಿಲಿಂದೀಚೆಗೆ', ಹೇಮಾಂಶು ಪ್ರಕಾಶನ, ಮಂಗಳೂರು ೧೯೯೧, ಪುಟಸಂಖ್ಯೆ-೫.

೭. ಚಂದ್ರಕಲಾ ನಂದಾವರ ; ಸಂದರ್ಶನ, ದಿನಾಂಕ ೦೪-೦೭-೨೦೧೭

೮. ಚಂದ್ರಕಲಾ ನಂದಾವರ : ಸಂದರ್ಶನ ದಿನಾಂಕ ೦೪-೦೭-೨೦೧೭

೯. ಸ್ಮರಣ ಸಂಚಿಕೆ : ಕಲೇವಾಸಂ, ೧೯೯೯, ಪುಟಸಂಖ್ಯೆ : ೧

೧೦. ೩೦-೦೭-೧೯೮೯ರ ಮುಂಗಾರು ಪತ್ರಿಕೆ ವರದಿ

೧೧. ಮನೋರಮಾ ಭಟ್ : ಸಂದರ್ಶನ, ದಿನಾಂಕ ೦೬-೦೬-೨೦೧೭

೧೨. ೨೯-೧-೧೯೯೩ರ ಹೊಸದಿಗಂತ ಪತ್ರಿಕೆ ವರದಿ

೧೩. ಸ್ಮರಣ ಸಂಚಿಕೆ : ಕಲೇವಾಸಂ, ೧೯೯೯ ಪುಟಸಂಖ್ಯೆ -೨

೧೪. ೧೧-೧೧-೧೯೯೩ರ ಮುಂಗಾರು ಪತ್ರಿಕೆ ವರದಿ

೧೫. ಎ.ಪಿ. ಮಾಲತಿ : ಸಂದರ್ಶನ ದಿನಾಂಕ ೦೩-೦೭-೨೦೧೭

೧೬. ಗುಲಾಬಿ ಬಿಳಿಮಲೆ (ಪ್ರ.ಸಂಪಾದಕರು) : ೨೦೧೩ರ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಯ ಸ್ಮೃತಿ ಸಂಚಯ- 'ಇನ್ನು ಸಾಕು !', ಮಹಿಳಾ ದೌರ್ಜನ್ಯ ವಿರೋಧಿ ವೇದಿಕೆ, ಮಂಗಳೂರು-೨೦೧೪.

# ೪. ಸಂಘದ ಪ್ರಮುಖ ಚಟುವಟಿಕೆಗಳು

ಕರಾವಳಿ ಲೇಖಕಿಯರ – ವಾಚಕಿಯರ ಸಂಘ ಮಹಿಳೆಯರಿಗಾಗಿ ಮಹಿಳೆಯರಿಂದಲೇ ಮಹಿಳೆಯರ ನೇತೃತ್ವದಲ್ಲಿ ನಡೆಯುವ ಸಾಹಿತ್ಯ ಸಂಘಟನೆ ಇದರ ಸ್ಥಾಪನೆ ೧೯೮೭ ಡಿಸೆಂಬರ್ ತಿಂಗಳಿನಲ್ಲಿ ಆರಂಭವಾಗಿ ಮೂವತ್ತು ವರ್ಷಗಳಾದವು. ಈ ಸುದೀರ್ಘ ಮೂರು ದಶಕದ ಅವಧಿಯಲ್ಲಿ ತಿಂಗಳಿಗೊಂದರಂತೆ ಕೆಲವೊಮ್ಮೆ ತಿಂಗಳಿಗೆ ಎರಡು ಕಾರ್ಯಕ್ರಮಗಳಂತೆ ಹಲವಾರು ಚಟುವಟಿಕೆಗಳು ಮೂರು ದಶಕದಲ್ಲಿ ನಡೆದಿವೆ. ಈ ಕ್ರಮಿಸಿದ ಹಾದಿಯನ್ನು ಹಿಂತಿರುಗಿ ನೋಡಿದಾಗ ನಮಗೇ ಹೆಮ್ಮೆ ಅನಿಸಿದೆ ಎಂಬುದಾಗಿ ಸಂಘದ ಹಿರಿಯ ಲೇಖಕಿಯರು ಹೇಳುತ್ತಾರೆ.

ಸಂಘದ ಮೂರು ದಶಕಗಳ ಚಟುವಟಿಕೆಗಳನ್ನು ಸಂಘದ ಸಾಧನೆ ಎಂದು ಪರಿಗಣಿಸಿ ಈ ಕೆಳಗಿನಂತೆ ದಾಖಲಿಸಲಾಗುತ್ತದೆ.

| ದಿನಾಂಕ | ಕಾರ್ಯಕ್ರಮದ ವಿವರ | ಭಾಗವಹಿಸಿದ ಗಣ್ಯರು |
|---|---|---|
| ೧೦-೦೯-೧೯೮೮ ಮಂಗಳೂರು | ಲೇಖಕಿಯರು ೧೯೮೭ರ ಸಾಹಿತ್ಯ ಸಮೀಕ್ಷೆ | ಎಸ್.ಆರ್. ವಿಜಯಶಂಕರ್, ಬಿ.ಭಾಸ್ಕರ ರಾವ್ ಸಬಿಹಾ ಭೂಮಿಗೌಡ, ಗಾಯತ್ರಿ ನಾವಡ |
| ಫೆಬ್ರವರಿ ೧೯೮೯ ಕಾರ್ಕಳ | 'ಮಹಿಳೆ ಮತ್ತು ಕಾನೂನು ವಿಚಾರಗೋಷ್ಠಿ | ಸಂತೋಷ ಕುಮಾರ ಗುಲ್ವಾಡಿ, ಪ್ರೇಮಾ ಆರ್ಯ ಅನ್ನಪೂರ್ಣ ಸುಧೀಂದ್ರ, ಬಿ.ಎಂ.ರೋಹಿಣಿ |
| ೧-೦೭-೧೯೮೦ ಮಂಗಳೂರು | ಕಾವ್ಯವರ್ಷ–ಕವಯಿತ್ರಿಯವರ ಸಮ್ಮಿಲನ ಕವಿಗೋಷ್ಠಿ | ವೈದೇಹಿ ಮತ್ತು ಮೂವತ್ತಕ್ಕೂ ಹೆಚ್ಚು ಜಿಲ್ಲೆಯ ಮತ್ತು ಕಾಸರಗೋಡಿನ ಕವಯಿತ್ರಿಯರು |
| ೨೯-೦೭-೧೯೮೯ ಸುರತ್ಕಲ್, | ದೃಶ್ಯ-ಶ್ರಾವ್ಯ (ನಾಟಕ-ವಿಚಾರಸಂಕಿರಣ) | ರಾಮದಾಸ್ ಉಡುಪಿ, ಮನೋರಮಾ, ಗೀತಾ ವೀಣಾ ಬನ್ನಂಜೆ, ಮಹಾಬಲಮೂರ್ತಿ ಕೊಡ್ಲೆಕೆರೆ, ಸ್ಕಂದ ಪ್ರಸಾದ್ |
| ೨೩-೦೯-೧೯೮೯ ಕಾಸರಗೋಡು | ಇಂದಿರಾಬಾಯಿ ಕಾದಂಬರಿ ವಿಚಾರಗೋಷ್ಠಿ | ಸಂತೋಷ ಕುಮಾರ ಗುಲ್ವಾಡಿ, ಮೋಹನ ಭಂಡಾರಿ, ಪ್ರಸನ್ನ ಕುಮಾರಿ, ಸುಶೀಲಾ ರಾವ್, ಡಿ.ಆರ್. ಪಾಂಡುರಂಗ, ರಾಧಾ ಮುರಳೀಧರ್ |
| ೧೦-೧೨-೧೯೮೯ ಉಡುಪಿ | ಗಿರಿಬಾಲೆ ಸನ್ಮಾನ | ಪ್ರೊ. ಎಂ. ರಾಜಗೋಪಾಲಾಚಾರ್ ಡಾ। ವಿಜಯ ದಬ್ಬೆ, ಇಂದಿರಾ ಹಾಲಂಬಿ |
| ೨೧-೧೨-೧೯೯೦ ಮಂಗಳೂರು | ಲೇಖಕಿಯರಿಬ್ಬರಿಗೆ ಸನ್ಮಾನ ಕಾವ್ಯ ಕಮ್ಮಟ | ಸರಸ್ವತಿ ಕಡಂಬಿಲ, ಭುವನೇಶ್ವರಿ ಹೆಗಡೆ ಡಾ। ಪುರುಷೋತ್ತಮ ಬಿಳಿಮಲೆ, ಕೆ. ಚಂದ್ರಕಲಾ ನಂದಾವರ, ಶಾಂತಾರಾಮ ರಾವ್, ಎಚ್. ಡುಂಡಿರಾಜ್ ಮತ್ತು ೨೫ ಮಂದಿ ಶಿಬಿರಾರ್ಥಿಗಳು |
| ೯-೧೯-೧೯೯೦ ಕಾರ್ಕಳ | ಕಥಾ ಕಮ್ಮಟ | ಕೆ. ಸದಾನಂದ ಕಾಮತ್, ಅಂಬಾತನಯ ಮುದ್ರಾಡಿ, ಉದ್ಯಾವರ ಮಾಧವ ಆಚಾರ್ಯ, ಬೊಳುವಾರು ಮಹಮ್ಮದ್ ಕುಂಞ, ಲೀಲಾವತಿ ಎಸ್. ರಾವ್, ಪ್ರೊ.ಬಿ.ಎಸ್. ಭಂಡಾರಿ, ಕೆ. ಶಾಂತಾರಾಮ್ ಮತ್ತು ತೊಂಬತ್ತಕ್ಕೂ ಅಧಿಕ |

| | | |
|---|---|---|
| | | ವಿದ್ಯಾರ್ಥಿನಿಯರು ಮತ್ತು ಮಹಿಳೆಯರು. |
| ಜನವರಿ ೧೯೯೧ ಪುತ್ತೂರು | ದಶಕದ ಸಾಹಿತ್ಯದಲ್ಲಿ ಸ್ತ್ರೀ ಚಿತ್ರಣ | ಡಾ। ವಿಜಯಾದಬ್ಬೆ, ಡಾ। ಲಲಿತಾ ಎಸ್.ಎನ್. ಭಟ್, ಗಣನಾಥ ಶೆಟ್ಟಿ ಎಕ್ಕಾರು, ವಾಮನ ನಂದಾವರ, ಸಬಿಹಾ ಭೂಮಿ ಗೌಡ, ಗೀತಾ ಸುರತ್ಕಲ್, ಬೊಳಂತಕೋಡಿ ಈಶ್ವರ ಭಟ್. |
| ಎಪ್ರಿಲ್ ೧೯೯೧ ಕಾರ್ಕಳ | ಯು. ಕೃಷ್ಣಾಬಾಯಿ ಕಾವ್ಯ ಪ್ರಶಸ್ತಿ | ಭಾಗ್ಯ ಜಯಸುದರ್ಶನ, ಸಂಜೀವರಾವ್, ಆಶಾಗೌರಿ ಪ್ರಧಾನ ಮತ್ತು ಕವಿಗೋಷ್ಠಿ ಮತ್ತು ೧೫ ಕವಯಿತ್ರಿಯರು. |
| ಅಕ್ಟೋಬರ್ ೧೯೯೧ ಉಳ್ಳಾಲ | ಕಥಾಶಿಬಿರ | ಸಂತೋಷ ಕುಮಾರ್ ಗುಲ್ವಾಡಿ, ನಾ.ಡಿಸೋಜ, ಹೇಮಲತಾ ಮಹಿಷಿ ಮತ್ತು ೩೦ಕ್ಕೂ ಹೆಚ್ಚು ಮಂದಿ ಕತೆಗಾರ್ತಿಯರು. |
| ನವಂಬರ್ ೧೯೯೧ | ಅನುಪಮಾ ಸಾಹಿತ್ಯಗೋಷ್ಠಿ ಮತ್ತು | ಎ.ವಿ. ನಾವಡ, ಮನೋಹರ ಪ್ರಸಾದ್, ಎ.ಪಿ.ಮಾಲತಿ, ಡಾ। ಲಲಿತಾ ಎಸ್.ಎನ್. ಭಟ್, ಡಿ. ರಘುನಾಥ ರಾವ್ ವೈದೇಹಿ, ಲೀಲಾವತಿ ಎಸ್.ರಾವ್, ರತ್ನಾವತಿ ಬೈಕಾಡಿ, ವಿ.ಜಿ. ಕಮಲಾ, ಡಾ। ಮಹೇಶ್ವರಿ ಯು., ಧರಣಿ ಕುಕ್ಕಾಜೆ |
| ಜನವರಿ ೧೯೯೨ ಕಾಸರಗೋಡು | ಎಂ.ಕೆ. ಇಂದಿರಾ ಕಾದಂಬರಿಗಳ ವಿಚಾರಗೋಷ್ಠಿ | ಪೆರ್ಲ ಕೃಷ್ಣ ಭಟ್, ಶ್ರೀಕಲಾ ಉಡುಪ, ಶೈಲಜಾ ಪುದುಕೋಳಿ |
| ೧೫-೨-೧೯೯೨ ಕಾರ್ಕಳ | ಯು. ಕೃಷ್ಣಾಬಾಯಿ ಕಾವ್ಯಪ್ರಶಸ್ತಿ ಪ್ರಧಾನ ಮತ್ತು ಕವಿಗೋಷ್ಠಿ | ಎನ್. ಗುರುರಾಜ್, ಸಂಜೀವರಾವ್, ಎನ್.ಕೆ. ಚೆನ್ನಕೇಶವ, ರವಿಶಂಕರ ಅತ್ತಾವರ, ಡಿ. ಬಿ. ರಜಿಯಾ, ಶಕುಂತಳಾ ಭಟ್, ಡಾ। ನಾ. ಮೊಗಸಾಲೆ ಮತ್ತು ೧೦ ಮಂದಿ ಕವಯಿತ್ರಿಯರು. |
| ಜನವರಿ ೧೯೯೩ ಮೂಲ್ಕಿ | ಮಹಿಳಾ ಸಾಹಿತ್ಯದ ನೆಲೆಗಳು | ಸಾರಾ ಅಬೂಬಕರ್, ಎನ್.ಬಿ.ನಂಬಿಯಾರ್, ಮಾಧವಿ ಭಂಡಾರಿ, ಯಶೋದಾ ಉಡುಪ, ಲೀಲಾವತಿ ಎಸ್.ರಾವ್, ಸುಕನ್ಯಾ ಕಳಸ, ಡಿ.ಬಿ. ರಜಿಯಾ, ಚಂದ್ರಕಲಾ ನಂದಾವರ, ಸುಶೀಲಾ ರಾವ್, ಶಕುಂತಳಾ ಭಟ್, ಸರೋಜಿನಿ, ಆರತಿ. |
| ೨೮-೩-೧೯೯೩ ಕಾರ್ಕಳ | ಸಾಹಿತ್ಯ ಸಮಾವೇಶ ಕವನ ಸಂಕಲನ ಬಿಡುಗಡೆ, ಕವಿಗೋಷ್ಠಿ, ಸಾಹಿತ್ಯಗೋಷ್ಠಿ | ಹೇಮಲತಾ ಮಹಿಷಿ, ಡಾ। ಸಿ. ಹೊಸಬೆಟ್ಟು, ಶೋಭಾ ಅನಂತ್, ಶ್ರೀಕಲಾ ಉಡುಪ, ಇಂದಿರಾ ಹಾಲಂಬಿ, ಎನ್. ಗಾಯತ್ರಿ, ಪಿ.ಎಸ್. ಗೀತ, ಪ್ರೊ. ಎಂ.ರಾಮಚಂದ್ರ, ಡಾ। ಸಂಧ್ಯಾ ರೆಡ್ಡಿ, ಡಾ।ಬಿನ್. ಸುಮಿತ್ರಾ ಬಾಯಿ, ಎಚ್. ಡುಂಡಿರಾಜ್, ಚಿದಂಬರ ಬೈಕಂಪಾಡಿ. ಜಿ.ಎನ್. ಮೋಹನ್, ನಾಗವೇಣಿ ಮಂಚಿ. ಕೆ.ಎಂ. ವಿಜಯಲಕ್ಷ್ಮಿ, ಯು.ಬಿ.ರಾಜಲಕ್ಷ್ಮಿ, |

| | | |
|---|---|---|
| | | ಶಾಂತಾ ನಾಗರಾಜ್, ಶಶಿಲೇಖಾ ಬಿ., ಆಶಾಲತಾ ಮೂಡಬಿದಿರೆ, ಶಾರದಾ ಎಸ್. ಶೆಟ್ಟಿ, ಶೋಭಾ ಕಲ್ಯಾಣಪುರ, ಶೈಲಜಾ ಏತಡ್ಕ, ಧರಣಿ ಕುಕ್ಕಾಜೆ, ಎಂ. ಜಾನಕಿ ಬ್ರಹ್ಮಾವರ, ಮುಮ್ತಾಜ್ ಬೇಗಂ, ಸ್ನೇಹಲತಾ ಕುಂಬಳೆ. |
| ೧೫-೫-೧೯೯೩ ಉಡುಪಿ | ಮಿನಿಕಥಾ ಗೋಷ್ಠಿ | ಶ್ರೀ ಸುಗಣೇಂದ್ರ ತೀರ್ಥ ಶ್ರೀಪಾದರು, ಸಂತೋಷಕುಮಾರ ಗುಲ್ವಾಡಿ, ಗೀತಾ ರಾಮಾನಜಮ್ ಮತ್ತು ೨೦ ಮಂದಿ ಕತೆಗಾರ್ತಿಯರು. |
| ೭-೧೧-೧೯೯೩ ಮಂಗಳೂರು | ಈ ಶತಮಾನದ ಸಾಮಾಜಿಕ ಮತ್ತು ಮತ್ತು ಸಾಹಿತ್ಯಿಕ ಹಿನ್ನೆಲೆಯಲ್ಲಿ ಮಹಿಳೆ' ವಿಚಾರಗೋಷ್ಠಿ-ಸಾಹಿತ್ಯ ಸಂವಾದ | ಡಾ। ಸಿ. ಹೊಸಬೆಟ್ಟು, ಬಿ.ಎಂ. ಇದಿನಬ್ಬ, ಡಾ।ಬಿ.ಎ. ವಿವೇಕ ರೈ, ಡಾ। ಸಬಿಹಾ ಭೂಮಿಗೌಡ, ಡಾ।ಯು. ಮಹೇಶ್ವರಿ, ಯು.ಬಿ. ರಾಜಲಕ್ಷ್ಮಿ, ಮಾಲತಿ ರಾವ್ ಪೇಜಾವರ, ಪ್ರೊ. ಲೀಲಾಭಟ್, ಉದ್ಯಾವರ ಮಾಧವ ಆಚಾರ್ಯ. ಅಬ್ದುಲ್ ರಶೀದ್, ಡಾ। ನಾ. ದಾಮೋದರ ಶೆಟ್ಟಿ, ಡಾ।ಪಿ.ಎನ್. ಮಯ್ಯ, ಪದ್ಮಾ ಶೆಣೈ, ಎ.ಪಿ. ಮಾಲತಿ, ಡಾ। ಸತ್ಯನಾರಾಯಣ ಮಲ್ಲಿಪಟ್ಟಣ, ಆರ್. ನರಸಿಂಹ ಮೂರ್ತಿ, ಮನೋಹರ ಪ್ರಸಾದ್, ಜಿ.ಕೆ. ಐತಾಳ್, ವೈದೇಹಿ, ರಾಮದಾಸ್, ಆನಂದಿ ಎಸ್.ರಾವ್. |
| ೨೦-೮-೧೯೯೪ ಮಂಗಳೂರು | ಕಾವ್ಯ ವರ್ಷ ಮತ್ತು ಕೃತಿ ಬಿಡುಗಡೆ ಸನ್ಮಾನ | ಶಾರದಾ ಶೆಟ್ಟಿ, ವಿ.ಗ.ನಾಯಕ್, ವಸಂತ ಕುಮಾರ್‌ಪೆರ್ಲ, ಅಮೃತ ಸೋಮೇಶ್ವರ, ರುಕ್ಮಿಣಿ ಉಡುಪ, ಶ್ರೀಕಲಾ ಉಡುಪ. |
| ೨೨-೧೦-೧೯೯೪ ಮತ್ತು ೨೩-೧೦-೧೯೯೪ ಮಂಗಳೂರು | ದ.ಕ.ಜಿಲ್ಲಾ ಮಹಿಳಾ ಸಾಹಿತ್ಯ ಸಮ್ಮೇಳನ | ಎ.ಪಿ.ಮಾಲತಿ, ಪ್ರೇಮಾ ಭಟ್, ಪದ್ಮಾ ಶೆಣೈ, ತಾರಾ ಭಟ್, ವಸುಮತಿ ಉಡುಪ, ಲೀಲಾ ಭಟ್, ಆನಂದಿ ಸದಾಶಿವ ರಾವ್, ಸಾರಾ ಅಬೂಬಕ್ಕರ್, ಶಾರದಾ ಆಚಾರ್, ಫಾ. ಪ್ರಶಾಂತ ಮಾಡ್ತ, ಸುನೀತಿ ಉದ್ಯಾವರ, ಇಂದಿರಾ ಹಾಲಂಬಿ, ವೈದೇಹಿ, ಲಲಿತಾ ಎಸ್.ಎನ್. ಭಟ್, ಡಾ। ಗಾಯತ್ರಿ ನಾವಡ, ಲೀಲಾವತಿ ಎಸ್. ರಾವ್, ಚಂದ್ರಪ್ರಭ, ಯಾಮಿನಿ, ಪಿ. ಸುಶೀಲಾ ಉಪಾಧ್ಯಾಯ, ಮಾಧವಿ ಭಂಡಾರಿ, ನಾಗವೇಣಿ ಮಂಚಿ, ಡಾ। ಸಬಿಹಾ ಭೂಮಿಗೌಡ, ಗಂಗಾ ಲಕ್ಷ್ಮೀರಾವ್ ಆರೂರು, ಶಾರದಾ ಶಾಸ್ತ್ರಿ, ರಾಮಕ್ಕ ಮುಗೇರ್ತಿ, |

| | | |
|---|---|---|
| | | ಯಜ್ಞಾವತಿ ಕೇಶವ ಕಂಗೆನ್, ಪಾತುಂಞಿ, ಜ್ಯುಡಿತ್ ಮಸ್ಕರೇನ್ಹಸ್, ಗಿರಿಜಾ ಯಾದವ್, ಲೀಲಾ ಬೈಪಡಿತ್ತಾಯ, ರತ್ನಾವತಿ ಬೈಕಾಡಿ, ಕುಲ್ಯಾಡಿ ಮಾಧವ ಪೈ, ಹರಿಕೃಷ್ಣ ಪುನರೂರು ಹಾಗೂ ಸುಮಾರು ೩೦೦ ಮಂದಿ ಭಾಗವಹಿಸಿದ್ದರು. |
| ೨-೪-೧೯೯೫ ಪುತ್ತೂರು | ಕೃತಿ ಬಿಡುಗಡೆ ಮತ್ತು ವಿಚಾರ ಸಂಕಿರಣ | ಡಾ। ಎಚ್.ಎಸ್. ಸುಜಾತ, ಹೇಮಲತಾ ಮಹಿಷಿ, ಎನ್. ಗಾಯತ್ರಿ ಡಾ। ಬಿ.ಎನ್. ಸುಮಿತ್ರಾ ಬಾಯಿ, ನೇಮಿಚಂದ್ರ, ಡಾ। ಶಾಲಿನಿ ರಘುನಾಥ್. |
| ೨೨-೪-೧೯೯೫ ಹೊಸಬೆಟ್ಟು | ಕಾವ್ಯ-ವೈಶಾಖ ಭಾವಗೀತ ಮತ್ತು ಅಭಿನಂದನ | ಡಾ। ಎಸ್.ವಿ. ಪರಮೇಶ್ವರ ಭಟ್, ಡಾ।ಸಿ. ರಾಮ್‌ದಾಸ್, ಶಾರದಾ ಶೆಟ್ಟಿ ಮತ್ತು ೧೫ ಮಂದಿ ಗಾಯಕಿಯರು. |
| ೧೩-೫-೧೯೯೫ ಮಂಗಳೂರು | ಸಾಹಿತ್ಯ ಸಂವಾದ | ಸಾರಾ ಅಬೂಬಕರ್, ಮನೋರಮಾ ಎಂ.ಭಟ್ ಲೀಲಾವತಿ ಎಸ್.ರಾವ್, ಬಿ.ಎಂ. ರೋಹಿಣಿ, ವಸಂತ ಕುಮಾರಿ |
| ೧೮-೦೬-೧೯೯೫ ಸುರತ್ಕಲ್ | ಅಭಿನಂದನೆ ಮತ್ತು ಕೃತಿ ಬಿಡುಗಡೆ | ಹೇಮಲತಾ ಮಹಿಷಿ, ಸಾರಾ ಅಬೂಬಕ್ಕರ್, ವೈದೇಹಿ, ಪ್ರೊ.ಸಿ.ಎನ್. ರಾಮಚಂದ್ರನ್, ಡಾ। ಬಿ.ಎನ್. ಸುಮಿತ್ರಾ ಬಾಯಿ, ಬಿ.ಎಂ.ರೋಹಿಣಿ ಮಾರ್ತಾ ಸಿಲ್ವ, ಕೆ.ಟಿ.ಗಟ್ಟಿ, ಕೆ. ಲೀಲಾವತಿ, ಮಾಧವಿ ಭಂಡಾರಿ, ಡಾ। ಬಿ.ಎ. ವಿವೇಕ ರೈ |
| ೨೫-೧೨-೧೯೯೫ ಉಳ್ಳಾಲ | ಸ್ತ್ರೀ ವಾದ- ಅಂದು-ಇಂದು ಕಮ್ಮಟ | ಡಾ। ವಿಜಯಾ ದಬ್ಬೆ, ಡಾ। ಪ್ರೀತಿ ಶುಭಚಂದ್ರ, ಪ್ರೊ.ಸಿ. ಎನ್. ರಾಮಚಂದ್ರನ್, ಡಿ. ರಘುನಾಥ ರಾವ್, ಅಮೃತ ಸೋಮೇಶ್ವರ, ಡಾ। ರಹಮತ್ ತರೀಕೆರೆ, ಡಾ।ನಾ.ದಾಮೋದರ ಶೆಟ್ಟಿ, ಆರ್. ನರಸಿಂಹ ಮೂರ್ತಿ, ಚಂಪಾವತಿ ಎಚ್.ಎಸ್. |
| ೨೦-೧-೧೯೯೬ ಕುಂದಾಪುರ | ಮಹಿಳೆಯರ ಕೃತಿಗಳಲ್ಲಿ ಪುರುಷರು ವಿಚಾರ ಸಂಕಿರಣ | ಎ.ಎಸ್.ಎನ್. ಹೆಬ್ಬಾರ್, ಶಾಂತಾ ನಾಗರಾಜ್, ಪ್ರತಿಭಾ ನಂದ ಕುಮಾರ್, ಸಬಿಹಾ ಭೂಮಿ ಗೌಡ, ಬಿ.ಟಿ. ಲಲಿತಾ ನಾಯಕ್, ಭಾಗೀರಥಿ ಹೆಗಡೆ, ಲೀಲಾವತಿ ಎಸ್.ರಾವ್. |
| ೧೧-೨-೧೯೯೬ ಮಂಗಳೂರು | ಪುಸ್ತಕ ಬಿಡುಗಡೆ ಮತ್ತು ಮಕ್ಕಳ ನಾಟಕ | ಭುವನೇಶ್ವರಿ ಹೆಗಡೆ, ಶಾರದಾ ಶಾಸ್ತ್ರಿ, ಇಂದಿರಾ ಹಾಲಂಬಿ, ಸುಶೀಲಾ ಆರ್. ರಾವ್, ಸೀತಾರಾಮ್ ಕುಲಾಲ್, ಬಿ.ಜಿ.ನಾಯಕ್ |
| ೪-೫-೧೯೯೬ ಬಂಟ್ವಾಳ | ಮುದ್ದಣ- ನೂರಿಪ್ಪತ್ತೈದು ಬೇಂದ್ರೆ-ನೂರು | ಹೇಮಾವತಿ ಹೆಗಡೆ, ಲೀಲಾವತಿ ಎಸ್.ರಾವ್, ಮನೋರಮಾ ಎಂ.ಭಟ್, ಪದ್ಮಾ ಶೆಣೈ. |
| ೨೫-೭-೧೯೯೬ ಸುರತ್ಕಲ್ | ಪುಸ್ತಕ ಬಿಡುಗಡೆ ದಕ್ಷಿಣ ಕನ್ನಡದ ಮೊದಲ | ಜಲಜಾಕ್ಷಿ ನಾಗಮಣಿ ಎಸ್.ರಾವ್, ಪರ್ಯ ಚಂದ್ರಭಾಗಿ ರೈ, ಲಲಿತಾ ರೈ. |

| | | |
|---|---|---|
| | ಲೇಖಕಿಯರು | ಆನಂದಿ ಎಸ್.ರಾವ್, ಡಾ| ವಿಜಯಾ ದಬ್ಬೆ, ಡಾ| ಶ್ರೀವಳ್ಳಿ ಕೆ.ಎಂ. ವಿಜಯಲಕ್ಷ್ಮಿ, ಮನೋರಮಾ ಎಂ. ಭಟ್, ಗಂಗಾ ಪಾದೇಕಲ್, ಯಶೋದ ಜೆನ್ನಿ |
| ೨-೧೧-೧೯೯೬ ಮಂಗಳೂರು | ೪ನೆಯ ಅಖಿಲ ಕರ್ನಾಟಕ ಲೇಖಕಿಯರ ಸಾಹಿತ್ಯ ಸಮ್ಮೇಳನ | ಎಚ್.ಎಸ್. ಪಾರ್ವತಿ, ಎಂ.ವೀರಪ್ಪ ಮೊಯಿಲಿ, ಡಾ|ಸಿ.ಎನ್. ರಾಮಚಂದ್ರನ್, ಸರಸ್ವತೀ ಗಜಾನನ ರಿಸಬೂಡ, ಡಾ|ಬಿ.ಎ. ವಿವೇಕ ರೈ, ಗೀತಾ ನಾಗಭೂಷಣ, ಹೇಮಾ ಪಟ್ಟಣ ಶೆಟ್ಟಿ, ಕೆ. ಉಷಾ ಪಿ. ರೈ, ಜಿ.ನಾರಾಯಣ, ಡಾ|ಮಂಗಳಾ ಪ್ರಿಯದರ್ಶಿನಿ, ವೈದೇಹಿ, ಡಾ| ವಿಜಯಾ ದಬ್ಬೆ, ಡಾ| ಸುನೀತಾ ಎಂ. ಶೆಟ್ಟಿ, ಡಾ| ನಿರುಪಮಾ, ಡಾ| ಕಮಲಾ ಹಂಪನಾಗರಾಜ್, ಸಾರಾ ಅಬೂಬಕರ್, ಡಾ| ಶೈಲಜಾ ಉಡಚಣ, ಡಾ|ಕುಸುಮಾ ಸೊರಬ, ಡಾ| ಮಲ್ಲಿಕಾ ಘಂಟಿ, ಹೇಮಲತಾ ಮಹಿಷಿ, ಡಾ| ಸುಶೀಲಾ ಉಪಾಧ್ಯಾಯ, ನಾಗಮಣಿ ಎಸ್. ರಾವ್ ಮತ್ತು ೫೦೦ ಮಂದಿ ಲೇಖಕಿಯರು. |
| ೧೪-೯-೧೯೯೭ ಪುತ್ತೂರು | ಹಾ.ಮಾ.ಕನಕ ಅವರ 'ಪಾಪನಾಶಿನಿ' ಕವನ ಸಂಕಲನ ಬಿಡುಗಡೆ ಮಹಿಳಾ ಕವಿಗೋಷ್ಠಿ | ಡಾ|ಕಿ.ರಂ. ನಾಗರಾಜ, ಜಯಂತ್ ಕಾಯ್ಕಿಣಿ, ಪ್ರತಿಭಾ ಮನೋರಮಾ ಎಂ. ಭಟ್, ಹಾ.ಮ. ಕನಕ, ನಂದಕುಮಾರ ಮತ್ತು ೧೧ ಜನ ಕವಯಿತ್ರಿಯರು. |
| ೨-೮-೧೯೯೮ ಮಂಗಳೂರು | ಅರುಂಧತಿರಾಯ್ ಅವರ 'ಗಾಡ್ ಆಫ್ ಸ್ಮಾಲ್ ಥಿಂಗ್ಸ್', ಕೃತಿ ವಿಮರ್ಶೆ ಮತ್ತು ಸಂವಾದ | ಡಾ|ಸಿ.ಎನ್. ರಾಮಚಂದ್ರನ್, ಡಾ| ಕಿಶೋರಿ ನಾಯಕ್, ಡಾ| ರವಿಶಂಕರ್ |
| ೯-೮-೧೯೯೮ ಪುತ್ತೂರು | 'ಆಟಿಡೊಂಜಿ ಕೂಟೊ' 'ಶ್ರಾವಣದ ಒಂದು ದಿನ' | ಡಾ|ಕೆ.ಆರ್. ಸಂಧ್ಯಾ ರೆಡ್ಡಿ, ಮೇಯರ್ ಹಿಲ್ಡಾ ಆಳ್ವ, ವೈದೇಹಿ ಮತ್ತು ೨೪ ಮಂದಿ ಕಥೆಗಾರ್ತಿಯರು ಮತ್ತು ಕವಯಿತ್ರಿಯರು. |
| ೨೦-೮-೧೯೯೮ | ವಿಚಾರಗೋಷ್ಠಿ ಮತ್ತು ಸಂಗೀತ ಕಾರ್ಯಕ್ರಮ | ಪ್ರೊ.ವಿ.ಬಿ.ಅರ್ತಿಕಜೆ, ಪಿ.ಎನ್. ಅಂಬಿಕಾ, ಬಿ.ಎನ್. ರೋಹಿಣಿ, ಅರುಣಾ ಎಸ್. ಭಟ್ |
| ಫೆಬ್ರವರಿ ೧೯೯೯ ಮಂಗಳೂರು | ಸ್ತ್ರೀವಾದ ಮತ್ತು ಹನಿಗವನ | ಚಂದ್ರಕಲಾ ನಂದಾವರ, ಡಾ| ಕಿಶೋರಿ ನಾಯಕ್, ವಿ.ಗ.ನಾಯಕ್, ಡಾ|ಕೆ. ಚಿನ್ನಪ್ಪ ಗೌಡ |
| ೫-೬-೧೯೯೯ ಮಂಗಳೂರು | 'ಮುಖಾಮುಖಿ' | ಸುಶೀಲಾ ಕೆ. ಪದ್ಮನಾಭ ಬಿ., ಚೇತನ್ ಕುಮಾರ್ ಕೆ.ಟಿ., ರಮೇಶ್ ಯು., ವಿಜಯಲಕ್ಷ್ಮಿ ಕೆ., ಸೀತಾಲಕ್ಷ್ಮಿ ಕೆ.ಪಿ., ಡಾ| ಸತ್ಯನಾರಾಯಣ |

| | | |
|---|---|---|
| | | ಮಲ್ಲಿಪಟ್ಟಣ. |
| ೧೧-೭-೯೯<br>ಸುರತ್ಕಲ್ | ಪುಸ್ತಕ ಬಿಡುಗಡೆ ಮತ್ತು<br>ವಿನೋದ ಸಾಹಿತ್ಯಗೋಷ್ಠಿ<br>ವ್ಯವಸ್ಥೆ<br>ಭುವನೇಶ್ವರಿ ಚಂಚಲಾ ಶ್ರೀ ಕಂಠಯ್ಯ-<br>ಹೊಸ್ತಿಲು ಕಥಾ ಸಂಕಲನ | ಎ.ಪಿ.ಮಾಲತಿ, ಮಿತ್ರವಿಂದಾ ಕುಲಕರ್ಣಿ,<br>ಸರೋಜಾ ಆಚಾರ್ಯ, ಚಂಚಲಾ ಶ್ರೀಕಂಠಯ್ಯ,<br>ಪ್ರೊ. ಸರೋಜಾ ಆಚಾರ್ಯ-ರಾಮದಾಸ್,<br>ಡಾ। ವಿಜಯಾ ಸುಬ್ಬರಾಜ್,<br>ಪ್ರೊ.ಬಿ.ಆರ್. ನಾಗೇಶ್, ಕೆ. ಲೀಲಾವತಿ,<br>ಹೆಗಡೆ, ಕೆ. ಗೋಪಾಲ ಭಟ್, ಟಿ.ಎಸ್.<br>ಅಂಬುಜಾ, ಮೋಹಿನಿ ಮಂಜುನಾಥ್,<br>ಮುರಳೀಧರ ಹಾಲಂಬಿ, ಅ. ಬಾಲಕೃಷ್ಣ ಶೆಟ್ಟಿ<br>ಪೊಳಲಿ, ಮಿತ್ರವಿಂದಾಕುಲಕರ್ಣಿ |
| ೩೦-೭-೧೯೯೯<br>ಉಡುಪಿ | ಆಟಿಡೊಂಜಿ ದಿನ<br>ಆಷಾಡದಲ್ಲೊಂದು ದಿನ | ರೆಮಿಡಿಯಾ ಡಿಸೋಜ, ಎ.ಪಿ.ಮಾಲತಿ,<br>ಆನಂದಿ, ವೆರೋನಿಕಾ ಕರ್ನೇಲಿಯಾ, ಡಾ।<br>ಸುಶೀಲಾ ಉಪಾಧ್ಯಾಯ ಮತ್ತು ಹತ್ತು ಮಂದಿ<br>ಕವಯತ್ರಿಯರು. |
| ೨-೧೦-೧೯೯೯<br>ಮಂಗಳೂರು | ಸೃಜನಶೀಲತೆ ಮತ್ತು ಮುಂದಿರುವ<br>ಸವಾಲುಗಳು ಮತ್ತು ಮಹಿಳಾ<br>ಸಾಹಿತ್ಯ ಮತ್ತು ನಿರೀಕ್ಷೆ | ವಿಜಯಲಕ್ಷ್ಮಿ ಶ್ಯಾನುಭೋಗ್, ಜಾನಕಿ ಎಂ.<br>ಬ್ರಹ್ಮಾವರ, ಮಂಜುಳಾ ಸುಕುಮಾರ್, ಡಾ।<br>ಕೆ.ವಿ. ಜಲಜಾಕ್ಷಿ, ಎಂ.ವಿ. ನಾಗರತ್ನ,<br>ರತ್ನಾ ಜಿ.ಕೆ. ಶೆಟ್ಟಿ, ವಿಜಯಲಕ್ಷ್ಮಿ<br>ಬಿ. ಶೆಟ್ಟಿ, ವೈದೇಹಿ, ಶಕುಂತಳಾ ಭಟ್,<br>ಕ್ಯಾಥರೀನ್ ರಾಡ್ರಿಗಸ್, ಸಾವಿತ್ರಿ ಎಂ.<br>ಭಟ್, ಅಸ್ಮಾ ಎರ್ಮಾಳು. |
| ೬-೧೧-೯೯<br>ಮಂಗಳೂರು | ಭಾವಗೀತ- ರಸಸಂಜೆ | ಪುತ್ತೂರು ನರಸಿಂಹ ನಾಯಕ್, ರಾಜು<br>ಅನಂತಸ್ವಾಮಿ, ವಿಶ್ವನಾಥ್, ಬಾನಂದೂರು<br>ಕೆಂಪಯ್ಯ, ಸುರೇಖ, ರಮೇಶ್ಚಂದ್ರ. |
| ೮-೧-೨೦೦೦<br>ಮಂಗಳೂರು | ಲೇಖಕಿಯರ ನಾಲ್ಕು ಕೃತಿಗಳ ಬಗ್ಗೆ<br>ವಿಮರ್ಶಾ ಗೋಷ್ಠಿ 'ನಾಕನೇ ನೀರು',<br>'ಖಾಲಿ ಮನೆ', 'ಶಿವಗಂಗಾ', 'ಮಿರೇಜ್' | ಡಾ। ಮಹೇಶ್ವರಿ, ನಾಗವೇಣಿ ಮಂಚಿ, ದಿನೇಶ್<br>ನಾಯಕ್ ನಾಗರತ್ನ ಚಂದ್ರಶೇಖರ್ |
| ೧೩-೨-೨೦೦೦<br>ಮಂಗಳೂರು | ಸ್ತ್ರೀವಾದ-ವಿಮರ್ಶೆ ಮತ್ತು ಪರಿಕಲ್ಪನೆ | ಎನ್. ಗಾಯತ್ರಿ, ನೇಮಿಚಂದ್ರ, ಸತ್ಯಾ ಎಸ್.,<br>ಚಂದ್ರಕಲಾ ನಂದಾವರ, ಪ್ರೊ.ಸಿ.ಎನ್.<br>ರಾಮಚಂದ್ರ, ಡಾ।ಬಿ.ಎ. ವಿವೇಕ ರೈ |
| ೧೮-೩-೨೦೦೦<br>ಮಂಗಳೂರು | ಕ.ಲೇ.ವಾ. ಸಂಘದ ಕಟ್ಟಡ<br>ಶಿಲಾನ್ಯಾಸ ಕಾರ್ಯಕ್ರಮ | ಕೇಂದ್ರ ಸರಕಾರದ ಸಹಾಯಕ ವಿತ್ತ ಸಚಿವ<br>ಧನಂಜಯ ಕುಮಾರ್, ಯೋಗೀಶ್ ಭಟ್ |
| ೨೬-೮-೨೦೦೦<br>ಮಂಗಳೂರು | ಕಾವ್ಯಕಾವೇರಿ-ಕವಿಗೋಷ್ಠಿ | ಅಮೃತ ಸೋಮೇಶ್ವರ, ಡಾ। ಮಹೇಶ್ವರಿ ಯು.<br>ನಾಗವೇಣಿ ಮಂಚಿ, ಕವಿತಾ ರೈ, ಸುಶೀಲಾ<br>ಆರ್. ರಾವ್, ಗಾಯತ್ರಿ ಉಡುಪ, ಶ್ರೀನಿವಾಸ<br>ಜೋಕಟ್ಟೆ, ಗಣೇಶ್ ಅಮೀನ್, ಡಾ।ನಾ.<br>ದಾಮೋದರ ಶೆಟ್ಟಿ, ರೂಪಶ್ರೀ ನಾಗರಾಜ್ |
| ೬-೧-೨೦೦೧ | ಪ್ರವಾಸ ಕಥನ ಕಾರ್ಯಕ್ರಮ | ಜಿ.ಎನ್. ಮೋಹನ್, ಸಾರಾ-ಅಮೆರಿಕಾ ಪ್ರವಾಸ |

| | | |
|---|---|---|
| ಸುರತ್ಕಲ್ | | ಲೀಲಾವತಿ ಎಸ್.ರಾವ್– ಮಲೇಶ್ಯಾ ಪ್ರವಾಸ |
| ೫–೮–೨೦೦೧ ಮಂಗಳೂರು | ಆಟಿ–ಶ್ರಾವಣ | ಲಲಿತಾ ರೈ, ಚಂದ್ರಮತಿ ಸೋಂದ, ಜಾನಕಿ ಎಂ. ಬ್ರಹ್ಮಾವರ, ಪ್ರಮೋದ ಸುವರ್ಣ, ವಿಜಯಗೌರಿ ಡಿ. ಪಕ್ಕಳ, ವೇದಾವತಿ ಡಿ., ಮೀನಾಕ್ಷಿ, ರಾಮಚಂದ್ರ ಮಹೇಶ್ವರಿ ಯು., ಸುಶೀಲಾ ಆರ್.ರಾವ್, ವಿಜಯಲಕ್ಷ್ಮಿ ಶ್ಯಾನುಭೋಗ, ಚಂಚಲಾ ಶ್ರೀಕಂಠಯ್ಯ, ಕವಿತಾ ಕೂಡ್ಲು |
| ೬–೧೦–೨೦೦೧ ಮಂಗಳೂರು | ಹಣತೆ ಹಚ್ಚೋಣ ಬನ್ನಿ ಮಹಿಳಾ ಸಬಲೀಕರಣ | ಆಶಾ ನಾಯಕ್–ನ್ಯಾಯವಾದಿ ಚೆನ್ನಮ್ಮ, ಸೀತಾ ಕುಂಞಕ್ಕೆ, ಎಲಿಜ ಪಿಂಟೋ, ಕಮಲ, ರತ್ನಮಾಲಾ, ಸಬಿತಾ ಮೊನಿಸ್ |
| ೨೦–೧೦–೨೦೦೧ ಮಂಗಳೂರು | ಚಂದ್ರಭಾಗಿ ರೈ ಸಂಸ್ಕರಣೆ | ಅಮೃತ ಸೋಮೇಶ್ವರ, ಗಂಗಾ ಪಾದೇಕಲ್, ಕಾಂತಿ ರೈ, ವಿಜಯಲಕ್ಷ್ಮಿ, ಏರ್ಯ ಲಕ್ಷ್ಮೀನಾರಾಯಣ ಆಳ್ವ |
| ೨೬–೧–೨೦೦೨ ಪಾವಂಜೆ | ತುಳು ಬದುಕು ಜಾನಪದ ಕೂಟ ಕ.ಸಂ. ಇಲಾಖೆ, ತುಳುಕೂಟ ಮದಿಪು ಬಿಡುಗಡೆ | ಬಿ. ದಾಮೋದರ ನಿಸರ್ಗ, ಡಾ।ಸಿ.ಹೊಸಬೆಟ್ಟು, ಡಾ।ನಾದಾ, ಚಂದ್ರಕಲಾ ನಂದಾವರ, ಅಮೃತಾ, ಶಶಿಲೇಖಾ ಬಿ., ಧರ್ಮಪಾಲ ಎಂ.ಟಿ., ಕೆ.ಕೆ. ಪೇಜಾವರ, ಇಂದಿರಾ, ವಿಜಯಲಕ್ಷ್ಮಿ, ಸುಮಂಗಲಾ ಕೃಷ್ಣಾಪುರ, ಹರಿಯಪ್ಪ ಪೇಜಾವರ. |
| ೨–೨–೨೦೦೨ ಮಣಿಪಾಲ | ಮಹಿಳೆ–ಸಂವಹನ ಸಮೂಹ ಮಾಧ್ಯಮ ಮತ್ತು ಮಹಿಳೆ | ಡಾ। ಕವಿತಾ ಸಿ.ವೈ., ಅನ್ವಿಕ್, ಡಾ। ಎನ್. ಗಾಯತ್ರಿ, ಡಾ। ಲೀಲಾರಾಮ್ |
| ೩–೩–೨೦೦೨ ಕಾಸರಗೋಡು | ಕಾನೂನು ಮಾಹಿತಿ ಶಿಬಿರ ಮತ್ತು ಅಭಿನಂದನೆ | ಶಂಕರ ಖಂಡೇರಿ, ಎಂ. ಮಹೇಶ್, ಶ್ರೀಕಲಾ ಉಡುಪ, ಸುನೀತಾ ಶೆಟ್ಟಿ ಮುಂಬಯಿ. |
| ೧–೫–೨೦೦೨ ಮಂಗಳೂರು | ಸಾರಾ ಅಬೂಬಕ್ಕರ್ ಅಭಿನಂದನೆ | ವೈದೇಹಿ, ಮುರಳೀಧರ ಉಪಾಧ್ಯ ಹಿರಿಯಡ್ಕ, ಕೃಷ್ಣಮೂರ್ತಿ, ಪಿ.ರೇವತಿ, ಬಿ.ಎಂ.ರೋಹಿಣಿ, |
| ೧೩–೭–೨೦೦೨ ಮಂಗಳೂರು | ವಿಚಾರಗೋಷ್ಠಿ ೨ ಕವನ ಸಂಕಲನ, ೨ ಕಥಾ ಸಂಕಲನ, ಹಾಸ್ಯ ಸಂಕಲನ, ಆತ್ಮಕಥೆಯ ಕುರಿತಾಗಿ | ಜಾನಕಿ ಬ್ರಹ್ಮಾವರ, ಡಾ। ಯು. ಮಹೇಶ್ವರಿ, ಡಾ।ಕೆ.ವಿ. ಜಲಜಾಕ್ಷಿ, ಭುವನೇಶ್ವರಿ ಹೆಗಡೆ, ಸುಧಾರಾಣಿ ಸುರತ್ಕಲ್ |
| ೨೬–೧೦–೨೦೦೨ ಮಂಗಳೂರು | ಚಂದ್ರಭಾಗಿ ರೈ ಸಂಸ್ಮರಣೆ (ವಿಚಾರಗೋಷ್ಠಿ) ೧) ದಶಕದ ಮಹಿಳಾ ಕಾವ್ಯ–ಹೊಸ ಅಲೆಗಳು ೨) ದಶಕದ ಮಹಿಳಾ ಕಥಾ ಸಾಹಿತ್ಯ ಪ್ರಶಸ್ತಿ ಪ್ರದಾನ | ಉಷಾ ಎಲ್.ಸಿ. ಸುಮಿತ್ರ ಕಾಂತಿ ರೈ, ಸಾವಿತ್ರಿ ಭಟ್ ಮುಳಿಯ |
| ೧೪–೩–೨೦೦೩ ಮಂಗಳೂರು | ಕನ್ನಡ ಸಾಹಿತ್ಯದಲ್ಲಿ ಮಹಿಳೆ–ನಿರ್ವಚನ –ವಿಚಾರಗೋಷ್ಠಿ ಮತ್ತು ಪುಸ್ತಕ ಬಿಡುಗಡೆ | ಡಾ। ಎಚ್.ಎಸ್.ಶ್ರೀಮತಿ, ಡಾ। ಮಲ್ಲಿಕಾ ಘಂಟಿ ಡಾ। ಯು. ಮಹೇಶ್ವರಿ, ರೇಖಾ ಬನ್ನಾಡಿ |

| | | |
|---|---|---|
| | (ವಾಣಿ ಗೋಖಲೆ–'ಮಾಮರದ ಇಂಚರ) | |
| ೧೪–೦೯–೨೦೦೩ | ಕಥಾ ಕಮ್ಮಟದ ಉದ್ಘಾಟನೆ<br>ಉಪನ್ಯಾಸ–ಮಾರ್ಗದರ್ಶನ | ಸಾರಾ ಅಬೂಬಕ್ಕರ್ ಕೆ. ಮಹಾಲಿಂಗ ಭಟ್<br>ಶ್ರೀಮತಿ ನೇಮಿಚಂದ್ರ, ಡಾ। ಸುನೀತಾ ಶೆಟ್ಟಿ<br>ಮತ್ತು ೩೦ ಮಂದಿ ಕಾಲೇಜು ವಿದ್ಯಾರ್ಥಿ<br>ವಿದ್ಯಾರ್ಥಿನಿಯರು ಭಾಗವಹಿಸಿದರು. |
| ೯–೧೨–೨೦೦೩<br>ಮಂಗಳೂರು | ಚಂದ್ರಭಾಗಿ ರೈ ದತ್ತಿನಿಧಿ<br>ಬಹುಮಾನ ವಿತರಣಾ ಕಾರ್ಯಕ್ರಮ | ಶ್ರೀ ಸತ್ಯನಾರಾಯಣ ಮಲ್ಲಿಪಟ್ಟಣ<br>ಶ್ರೀ ಏರ್ಯ ಲಕ್ಷ್ಮೀ ನಾರಾಯಣ ಆಳ್ವ |
| ೨೦–೦೩–೨೦೦೪ | ಸಂಸ್ಕೃತಿ–ಸ್ತ್ರೀವಾದ– ಉಡುಪಿಸಾಹಿತ್ಯ,<br>ವಿಚಾರ ಸಂಕಿರಣ ಹಾಗೂ<br>ಸಂವಾದ ಕಾರ್ಯಕ್ರಮ<br>ಕರ್ನಾಟಕ ಲೇಖಕಿಯರ ಸಂಘ,<br>ಬೆಂಗಳೂರು<br>ತರಂಗ ಸಾಪ್ತಾಹಿಕ, ಮಣಿಪಾಲ<br>ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ<br>ಕೇಂದ್ರ ಉಡುಪಿ | |
| ೨೫–೫–೨೦೦೪<br>ಮಂಗಳೂರು | ಕರಾವಳಿ ಲೇಖಕಿಯರ ಸಂಘ<br>ವಿಚಾರಗೋಷ್ಠಿ | ಪುರಾಣದ ಸ್ತ್ರೀ ಪಾತ್ರಗಳು–ನಿರ್ವಚನ–<br>ಡಾ। ಶಶಿಕಲಾ ಗುರುಪುರ, ಡಾ। ಕವಿತಾ ರೈ,<br>ಡಾ। ನಿಕೇತನ, ಡಾ। ಯಶೋದಾ ಉಡುಪ,<br>ಲತಾ ಜಿ.ಎಸ್. |
| ೨೮–೦೮–೨೦೦೪<br>ಮಂಗಳೂರು | ಆಟಿಯ ಆಚರಣೆಗಳು–ಶ್ರಾವಣದಲ್ಲೊಂದು<br>ಮಹಿಳೆಯರ ಕೂಟ | ಡಾ। ವಾಮನ ನಂದಾವರ, ಶಾಲೆಟ್ ಪಿಂಟೋ<br>ಬಿ.ಎಂ.ರೋಹಿಣಿ, ಚಂದ್ರಕಲಾ ನಂದಾವರ,<br>ಸಾರಾ ಅಬೂಬಕ್ಕರ್ |
| ೨೦–೧೧–೨೦೦೪<br>ಮಂಗಳೂರು | ಜನತೆಯತ್ತ ಕನ್ನಡ ಕಾರ್ಯಕ್ರಮ<br>ಕನ್ನಡಾಭಿಮಾನ ಮತ್ತು ಮಹಿಳೆಯರು<br>ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು<br>ದ.ಕ.ಜಿಲ್ಲಾ ಜಾಗೃತಿ ಸಮಿತಿ ಮಹಿಳಾ<br>ಮಂಡಲಗಳ ಒಕ್ಕೂಟ, ಮಂಗಳೂರು<br>ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು<br>ದ.ಕ.ಜಿಲ್ಲೆ ಸಾರಸ್ವತ ವಿದ್ಯಾಸಂಸ್ಥೆ | ಪ್ರದೀಪ ಕುಮಾರ ಕಲ್ಕೂರ, ಬಿ.ಎಂ. ಇದಿನಬ್ಬ<br>ಕೆ.ಟಿ.ಗಟ್ಟಿ, ಸಿ.ಎಚ್. ಕೃಷ್ಣಶಾಸ್ತ್ರಿ, ನಂದಾ<br>ಡಿ.ಎಸ್. ವಾಸುದೇವ ರಾವ್, ವಾಣಿ<br>ಪೆರಿಯೋಡಿ |
| ೧೯–೦೬–೨೦೦೫<br>ಪುತ್ತೂರು | ಕರ್ನಾಟಕ ಸಂಘ ಪುತ್ತೂರು<br>ಇವರ ಜೊತೆಗೆಪುಸ್ತಕ ಬಿಡುಗಡೆ<br>ಸ್ತ್ರೀ ಭಿನ್ನ ಮುಖಗಳು ಕಗ್ಗೊಲೆಗಳು | ನಾ. ದಾಮೋದರ ಶೆಟ್ಟಿಯವರ ಅಧ್ಯಕ್ಷತೆ<br>ಬಿ.ಎಂ. ರೋಹಿಣಿ, ಡಾ।ಶಂಕರ ಖಂಡೇರಿ |
| ೭–೮–೨೦೦೫<br>ಮಂಗಳೂರು | ಆಟಿಡೊಂಜಿ ಕೂಟೊ<br>ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ<br>ಮಂಗಳೂರು ತಾಲೂಕು ಮಹಿಳಾ<br>ಮಂಡಲಗಳ ಒಕ್ಕೂಟ | ಸೀತಾರಾಮ ಕುಲಾಲ್, ಜಯಂತಿ ಕೆ., ಡಾ।ಬಿ.ಕೆ.<br>ರವೀಂದ್ರ ಮನೋರಮಾ ಎಂ. ಭಟ್, ರಾಧಾ<br>ಮುರಲೀಧರ್ ಬಳಗ |
| ೧–೧೦–೨೦೦೫<br>ಮಂಗಳೂರು | ಸಂಸ್ಕೃತಿ ದಿನ– ಮಹಿಳಾ ಜಗತ್ತು<br>ಅಂದು–ಇಂದು | ಶ್ಯಾಮಲಾ ಭಂಡಾರಿ, ಮುಮ್ತಾಜ್ ಬೇಗಂ<br>ರೂಪಕಲಾ ಆಳ್ವ, ಪರಮೇಶ್ವರಿ ಲೋಕೇಶ್ವರ, |

| | | |
|---|---|---|
| | (ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಂಟಿ ಆಶ್ರಯದಲ್ಲಿ) | ಗ್ಲೇಡಿಸ್ ರೇಗೋ |
| ೧-೧೦-೨೦೦೫ ಮಂಗಳೂರು | 'ಸಂಸ್ಕೃತಿ ದಿನ' (ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜೊತೆಗೆ)<br>ತುಳು ಜಗತ್ತು, ವೈದಿಕ ಜಗತ್ತು<br>ಉರ್ದು ಕವಿತೆಗಳು | ಶ್ಯಾಮಲಾ ಭಂಡಾರಿ – ಅಧ್ಯಕ್ಷತೆ<br>ರೂಪಕಲಾ ಆಳ್ವ, ಪರಮೇಶ್ವರಿ ಲೋಕೇಶ್ವರಿ<br>ಮುಮ್ತಾಜ್ ಬೇಗಂ |
| ೨೫-೨-೨೦೦೬ | ಕನ್ನಡ ಮತ್ತು ಮಹಿಳೆ (ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಜೊತೆಗೆ) | |
| | ಉದ್ಘಾಟನೆ : | ಶ್ರೀ ಇದಿನಬ್ಬ |
| | ಅಧ್ಯಕ್ಷತೆ : | ಡಾ। ಕೆ.ಆರ್. ಸಂಧ್ಯಾ ರೆಡ್ಡಿ |
| | ಪ್ರಬಂಧ ಮಂಡನೆ : | ಸಾರಾ ಅವರ ಕಾದಂಬರಿಗಳು–ಜಯಂತಿ ಕೆ.<br>ಸಾರಾ ಅವರ ಇತರ ಕೃತಿಗಳು–ಶೈಲಜಾ ಏತಡ್ಕ<br>ವೈದೇಹಿಯವರ ಸಾಹಿತ್ಯ ಸುಧಾರಾಣಿ<br>ವೈದೇಹಿಯವರ ಕಾವ್ಯ– ಡಾ। ಕವಿತಾ ರೈ<br>ನಾಡೋಜ ಪ್ರಶಸ್ತಿ ಪಡೆದ ಸಾರಾಗೆ ಅಭಿನಂದನೆ–ಸನ್ಮಾನ |
| ೧೯-೦೮-೨೦೦೬ | ಕರ್ನಾಟಕ ಸರಕಾರದ ಮಾಜಿ ಸಚಿವೆ ಲೀಲಾವತಿ ಆರ್. ಪ್ರಸಾದ್ ಅವರಿಂದ ಸಾಹಿತ್ಯ ಸದನ ಉದ್ಘಾಟನೆ. | |
| ೧೮-೧೧-೨೦೦೬ | ಕರ್ನಾಟಕ ಸಂಘ ಪುತ್ತೂರು ಇವರ ಸಹಯೋಗದಲ್ಲಿ ಅಂಬಿಕಾ ಪಡಾರು ಅವರ ಪುಸ್ತಕ ಬಿಡುಗಡೆ | |
| | ಅಧ್ಯಕ್ಷತೆ : | ಸುಬ್ರಾಯ ಚೊಕ್ಕಾಡಿ (ರಾಜ್ಯೋತ್ಸವ ಪ್ರಶಸ್ತಿ ವಿಜೇತರು) |
| ೧೬-೧೨-೨೦೦೬ | ಶ್ರೀಮತಿ ಗಂಗಾ ಪಾದೇಕಲ್ ಅವರ ಸಾಹಿತ್ಯ ಸಮೀಕ್ಷೆ ಪ್ರಬಂಧ ಮಂಡನೆ | |
| | ಕಥಾ ಸಾಹಿತ್ಯ : | ರಂಜಿನಿ ಶೆಟ್ಟಿ |
| | ಕಾದಂಬರಿ ಸಾಹಿತ್ಯ : | ಮಂಜುಳಾ ಸುಕುಮಾರ್ |
| | ನಾಟಕ ವಾಚನ : | ಶ್ರೀ ಕಲಾ ಉಡುಪ |
| ೨೩-೧೨-೨೦೦೬ ಮಂಗಳೂರು | ದಿ।ರತ್ನಮ್ಮ ಹೆಗ್ಗಡೆಯವರ ವ್ಯಕ್ತಿತ್ವ– ಸಾಹಿತ್ಯ ಸಮೀಕ್ಷೆ | |
| | ಅಧ್ಯಕ್ಷತೆ : | ಶ್ರೀಮತಿ ಶೀಲಾವತಿ ಕೊಳಂಬೆ |
| | ಪ್ರಬಂಧ ಮಂಡನೆ : | ಶಾರದಾ ಆರ್. ರಾವ್ |
| | ಪ್ರವಾಸ ಕಥನದ ಬಗ್ಗೆ : | ಎ. ಪಿ .ಮಾಲತಿ |
| | ಓದು–ಬರಹ ಕೃತಿ ಬಿಡುಗಡೆ : | ಚಂದ್ರಕಲಾ ನಂದಾವರ ಅವರ ಮಾತು |
| ೨೦-೧-೨೦೦೭ ಕಾಸರಗೋಡು | ಕನ್ನಡ ಸಾಹಿತ್ಯ ಪರಿಷತ್ತು ಕಾಸರಗೋಡು ಇವರ ಸಹಯೋಗದಲ್ಲಿ ಲಕ್ಷ್ಮಿ ಕುಂಜತ್ತೂರು ಅವರ ಸಾಹಿತ್ಯ ಸಮೀಕ್ಷೆ | |
| | ಅಧ್ಯಕ್ಷತೆ : | ಡಾ। ಯು. ಮಹೇಶ್ವರಿ |
| | ಶಿಶು ಸಾಹಿತ್ಯ : | ಕುಮಾರಿ ವೇದಾವತಿ |
| | ಕಾದಂಬರಿ : | ಬಿ.ಎಂ. ರೋಹಿಣಿ |
| ೨೭-೦೧-೨೦೦೭ ಮಂಗಳೂರು | ಶ್ರೀಮತಿ ಇಂದಿರಾ ಹಾಲಂಬಿಯವರ ಸಾಹಿತ್ಯ ಸಮೀಕ್ಷೆ | |
| | ಅಧ್ಯಕ್ಷತೆ : | ಡಾ। ಅಮೃತ ಸೋಮೇಶ್ವರ |

